# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಮೇ ೫, ೨೦೧೬ (ವೈಶಾಖ ೧೫, ಶಕ ವರ್ಷ ೧೯೩೮)<br>Bengaluru, Thursday, May 5, 2016 (Vaishakha 15, Shaka Varsha 1938) | ಸಂಚಿಕೆ ೧೮<br>Issue 18 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004, ದಿನಾಂಕ: 15–03–2005
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04–09–2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013, ದಿನಾಂಕ: 17–05–2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015, ದಿನಾಂಕ: 29–04–2015, 18–05–2015, 01–06–2015(TA), 04–06–2015, 01–07–2015, 03–08–2015, 01–09–2015, 15–10–2015, 03–12–2015, 05–12–2015, 10–12–2015 (TA), 23-01-2016 ಮತ್ತು 04–02–2016.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ4, ದಿನಾಂಕ: 22–06–2015(TA), 21–07–2015(TA), 25–08–2015(TA), 28–09–2015(TA), ಮತ್ತು 28–10–2015(TA),
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015, ದಿನಾಂಕ: 22–06–2015.
7. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ2 ದಿನಾಂಕ: 04–01–2016(TA), 22–01–2016(TA),

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ: 13–05–2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ರೂ. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ರೂ. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ರೂ. 106.54 ಕೋಟಿಗಳಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ರೂ. 97.68 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ರೂ. 8.86 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ. 7,197.16 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5), (6) ಮತ್ತು (7)ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015–16 ಸಾಲಿನ ಫೆಬ್ರವರಿ 2016ರವರೆಗೆ ಸಹಾಯಧನ ರೂ. 5,313.21 ಕೋಟಿಗಳನ್ನು ಬಿಡುಗಡೆ ಮಾಡಿದೆ.

ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ರೂ. 443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರೂ. 91.14 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ರೂ. 352.08 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. 2014–15ನೇ ಸಾಲಿನ ಬಾಕಿ ಸಹಾಯಧನ ರೂ. 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರೂ. 84.70 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನು ರೂ. 323.86 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7,197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 375.00 ಕೋಟಿಗಳನ್ನು 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ರೂ. 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ 996 ವೆಚ್ಚ–1/2015 ದಿನಾಂಕ 28–07–2015ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ 78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 7,498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5), (6) ಮತ್ತು (7)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ರೂ. 5,313.21 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7,197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪ್‌ಸೆಟ್ಟು, ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು | 4225.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಬಾಬ್ತು | 91.41 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | 84.70 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು | 97.68 |
| ತ್ರಿಪಕ್ಷೀಯ ಹೊಂದಾಣಿಕೆ–ಏಪ್ರಿಲ್ 2015ರಿಂದ ಡಿಸೆಂಬರ್ 2015ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 812.42 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತುನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ | 2.00 |
| ಫೆಬ್ರವರಿ 2016ವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ | **5,313,21** |

7. ಮಾರ್ಚ್ 2016ರ ಮಾಹೆಗೆ ಸಹಾಯಧನ, ಬಾಕಿ ಸಹಾಯಧನ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದ್ದು, ಅದರಂತೆ ಪ್ರಸ್ತುತ ಆದೇಶ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7,197.16 ಕೋಟಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 375.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಪ್ರತಿ ಮಾಹೆಯಾನ | 15.96 |
| ಭಾಗ್ಯಜ್ಯೋತಿ/ ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.86 |
| ಮಾರ್ಚ್ 2016ರ ಮಾಹೆಗೆ ಒಟ್ಟು ಬಿಡುಗಡೆ | 399.82 |

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 6 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ 01–03–2016**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ಮಾರ್ಚ್ 2016ರ ಮಾಹೆಗೆ ರೂ. 375.00 ಕೋಟಿಗಳ (ರೂ. ಮುನ್ನೂರ ಎಪ್ಪತ್ತೈದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸದೆ.

ರೂ. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ | 2015–16ರ ಮಾರ್ಚ್ 2016 ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 23.22 | 2.78 | **26.00** |
| ಮವಿಕಂ | 22.42 | 1.58 | **24.00** |
| ಹುವಿಕಂ | 161.82 | 2.18 | **164.00** |
| ಗುವಿಕಂ | 81.21 | 6.79 | **88.00** |
| ಚಾವಿಸನಿನಿ | 65.91 | 1.09 | **67.00** |
| ಹು.ಗ್ರಾಸ.ಸಂ | 5.35 | 0.65 | **6.00** |
| **ಒಟ್ಟು** | **359.93** | **15.07** | **375.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನದ ಬಾಬ್ತು ಕ್ರಮವಾಗಿ ರೂ. 9.05 ಕೋಟಿ ಹಾಗೂ ರೂ. 6.91ಕೋಟಿಗಳನ್ನು ಮಾರ್ಚ್ 2016ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ

ರೂ. ಕೋಟಿಗಳಲ್ಲಿ

| ವಿಸಕಂಗಳು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು |
|---|---|---|---|
| ಬೆವಿಕಂ | 1.38 | 1.20 | **2.58** |
| ಮವಿಕಂ | 1.25 | 0.50 | **1.75** |
| ಗುವಿಕಂ | 3.80 | 3.83 | **7.63** |
| ಚಾವಿಸನಿನಿ | 2.62 | 1.15 | **3.77** |
| ಹುಕ್ಕೇರಿ | 0.00 | 0.23 | **0.23** |
| **ಒಟ್ಟು** | **9.05** | **6.91** | **15.96** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ರೂ. 8.86 ಕೋಟಿಗಳನ್ನು ಮಾರ್ಚ್ 2016ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

ರೂ. ಕೋಟಿಗಳಲ್ಲಿ

| ವಿಸಕಂಗಳು | ಒಟ್ಟು |
|---|---|
| ಬೆವಿಕಂ | 2.10 |
| ಮವಿಕಂ | 2.68 |
| ಹುವಿಕಂ | 1.18 |
| ಗುವಿಕಂ | 0.00 |
| ಚಾವಿಸನಿನಿ | 2.90 |
| **ಒಟ್ಟು** | **8.86** |

4. ಮೇಲಿನ ಆದೇಶ ಭಾಗದ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

ರೂ. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | ಮಾರ್ಚ್ 2016ರ ಮಾಹೆಗೆ ಸಹಾಯಧನ ಬಿಡುಗಡೆ | | | ಮಾರ್ಚ್ 2016ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ಬಾಬ್ತು ವಿಸಕಂಗಳಿಗೆ ಬಿಡುಗಡೆ | | | ಭಾ.ಜ್ಯೋ/ ಕು. ಜ್ಯೋ ಬಾಕಿ ಮನ್ನಾ ಬಾಬ್ತು ಮಾರ್ಚ್ 2016ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು |
|---|---|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು | | | | |
| ಬೆವಿಕಂ | 26.00 | 0.00 | 26.00 | 1.38 | 1.20 | *2.58 | *2.10 | 30.68 | 0.00 | 30.68 |
| ಮವಿಕಂ | 24.00 | 0.00 | 24.00 | 1.25 | 0.50 | *1.75 | *2.68 | 28.43 | 0.00 | 28.43 |

| | | | | | | | | | | |
|---|---|---|---|---|---|---|---|---|---|---|
| ಹುವಿಕಂ | 95.00 | 69.00 | 164.00 | 0.00 | 0.00 | 0.00 | 1.18 | 95.00 | 70.18 | 165.18 |
| ಗುವಿಕಂ | 65.00 | 23.00 | 88.00 | 3.80 | 3.83 | 7.63 | 0.00 | 65.00 | 30.63 | 95.63 |
| ಚಾವಿಸನಿನಿ | 42.00 | 25.00 | 67.00 | 2.62 | 1.15 | 3.77 | 2.90 | 42.00 | 31.67 | 73.67 |
| ಹು. ಗ್ರಾಸ. ಸಂ | 0.00 | 6.00 | 6.00 | 0.00 | 0.23 | 0.23 | 0.00 | 0.00 | 6.23 | 6.23 |
| ಒಟ್ಟು | **252.00** | **123.00** | **375.00** | **9.05** | **6.91** | **15.96** | **8.86** | **261.11** | **138.71** | **399.82** |

* ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆಮಾಡಿರುವ ಹೆಚ್ಚುವರಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5 ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 95.00 ಕೋಟಿಗಳಲ್ಲಿ ರೂ. 25.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾಣಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ವಿದ್ಯುತ್ ಖರೀದಿ ವೆಚ್ಚಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

6 ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ರೂ. 6.23 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

7 ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 261.11 ಕೋಟಿಗಳನ್ನು , ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 76.41 ಕೋಟಿಗಳನ್ನು, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 30.63 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ರೂ. 31.67 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

8 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ. ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

9 ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

10 ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದು.

11 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು, ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

12 ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ :ಎಫ್‌ಡಿ 1466 ವೆಚ್ಚ–1/15 ದಿನಾಂಕ: 20–01–2016ರಲ್ಲಿ ನೀಡಿರುವ ಸಹಮತಿಯನ್ವಯ ಸಹಾಯಧನ ಬಿಡುಗಡೆಮಾಡಿದೆ.

**P.R.236**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04–09–2008.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013, ದಿನಾಂಕ: 17–05–2013.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015, ದಿನಾಂಕ: 29–04–2015, 18–05–2015, 01–06–2015 (TA), 04–06–2015, 01–07–2015, 03–08–2015, 01–09–2015, 15–10–2015, 03–12–2015, 05–12–2015, 10–12–2015 (TA), 23—01–2016, 04–02–2016 ಮತ್ತು 01–03–2016.

4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ4, ದಿನಾಂಕ: 22–06–2015(TA), 21–07–2015(TA), 25–08–2015(TA), 28–09–2015(TA), ಮತ್ತು 28–10–2016(TA),
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015, ದಿನಾಂಕ: 22–06–2015.
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ2 ದಿನಾಂಕ: 04–01–2016(TA), 22–01–2016(TA),

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ-1ರ ಸರ್ಕಾರಿ ಆದೇಶದಲ್ಲಿ ನಿಗಧಿಪಡಿಸಿರುವ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊತ್ತವನ್ನು ಸರ್ಕಾರದಿಂದ ಮರುಪಾವತಿ ಮಾಡುವುದಕ್ಕೆ ಅನುಮೋದನೆ ನೀಡಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.
3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ. 7197/16 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗಧಿಪಡಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ದರ ಆದೇಶ 2013ರಲ್ಲಿ , 2011–12ನೇ ಸಾಲಿಗೆ ರೂ. 443.49 ಕೋಟಿಗಳಷ್ಟು ಹೆಚ್ಚುವರಿ ಸಹಾಯಧನವನ್ನು ಅನುಮೋದಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2014ರ ದರ ಆದೇಶದಲ್ಲಿ 2014–15ನೇ ಸಾಲಿಗೆ ರೂ. 6391.56 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿತ್ತು. ಇದರಲ್ಲಿ ರೂ. 5983.00 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನೂ ರೂ. 408.56 ಕೋಟಿಗಳ ಬಾಕಿ ಸಹಾಯಧನ ಬಿಡುಗಡೆ ಮಾಡಬೇಕಾಗಿದೆ.
4. ಆರ್ಥಿಕ ವರ್ಷ 2015–16ನೇ ಸಾಲಿನ ಆಯವ್ಯಯದಲ್ಲಿ ರೂ. 7498.00 ಕೋಟಿಗಳ ಸಹಾಯಧನವನ್ನು ಒದಗಿಸಿದೆ. ಇದರಲ್ಲಿ ಮೇಲೆ ಓದಲಾದ (3), (4), (5) ಮತ್ತು (6)ರ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ 01–03–2016ರವರೆಗೆ ರೂ. 5,713.03 ಕೋಟಿಗಳನ್ನು ಈಗಾಗಲೇ ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲಾಗಿದೆ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿನ ಏಪ್ರಿಲ್–2015 ರಿಂದ ಮಾರ್ಚ್ 2015ರ ವರೆಗೆ ಬಿಡಗಡೆ ಮಾಡಿರುವ ಸಹಾಯಧನ | 4,600.00 |
| ದಿನಾಂಕ 13–05–203ರ ಅಂತ್ಯಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡಸಹಿತ ಬಾಕಿ ಮೊತ್ತದಲ್ಲಿ ಬಿಡುಗಡೆ ಮಾಡಿರುವ ಹಣ. | 106.54 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 100.46 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | 91.61 |
| ತ್ರಿಪಕ್ಷೀಯ ಹೊಂದಾಣಿಕೆ–2015–16ನೇ ಸಾಲಿನ ಡಿಸೆಂಬರ್ 2015ರ ಅಂತ್ಯಕ್ಕೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 812.42 |
| ಸಹಾಯಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತುನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| **ಒಟ್ಟು 01–03–2016ರವರೆಗೆ ಬಿಡುಗಡೆ ಸಹಾಯಧನ** | **5,713.03** |

5. 2015–16ನೇ ಸಾಲಿನಲ್ಲಿ ಡಿಸೆಂಬರ್ 2015ರ ಅಂತ್ಯದವರೆಗೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಸರಿಹೊಂದಿಸಿರುವ ಮೊತ್ತದ ವಿವರ ಈ ಕೆಳಕಂಡತ್ತಿದೆ.

**ರೂ. ಕೋಟಿಗಳಲ್ಲಿ**

| ವಿಸಕಂ | ಬೆವಿಕಂ | ಮವಿಕಂ | ಹುವಿಕಂ | ಗುವಿಕಂ | ಚಾವಿಸನಿನಿ | ಕವಿನಿನಿ | | ಒಟ್ಟು |
|---|---|---|---|---|---|---|---|---|
| | ವಿದ್ಯುತ್ ತೆರಿಗೆ | | | | | ವಿದ್ಯುತ್ ತೆರಿಗೆ | ರಾಜಧನ | |
| **ಏಪ್ರಿಲ್–15** | 63.26 | 8.15 | 8.17 | 6.90 | 8.50 | 0.57 | 3.91 | **100.00** |
| **ಮೇ–15** | 60.47 | 9.06 | 11.88 | 8.14 | 6.80 | 0.61 | 3.04 | **100.00** |
| **ಜೂನ್–15** | 63.77 | 8.45 | 10.58 | 8.28 | 6.50 | 0.50 | 1.92 | **100.00** |

| | | | | | | | | |
|---|---|---|---|---|---|---|---|---|
| ಜುಲೈ–15 | 58.07 | 8.55 | 9.66 | 8.83 | 5.00 | 0.54 | 3.68 | **94.33** |
| ಆಗಸ್ಟ್–15 | 52.27 | 8.25 | 7.95 | 6.41 | 6.84 | 0.47 | 4.91 | **87.10** |
| ಸೆಪ್ಟೆಂಬರ್–15 | 51.76 | 3.93 | 10.30 | 8.81 | 5.74 | 0.47 | 1.92 | **82.93** |
| ಅಕ್ಟೋಬರ್–15 | 48.83 | 7,61 | 12.03 | 7.27 | 6.60 | 0.55 | 1.07 | **83.96** |
| ನವೆಂಬರ್–15 | 49.25 | 8.09 | 10.02 | 7.09 | 7.25 | 0.50 | 0.65 | **82.85** |
| ಡಿಸೆಂಬರ್–15 | 46.68 | 7.15 | 5.38 | 12.33 | 8.20 | 0.56 | 0.95 | **81.25** |
| **ಒಟ್ಟು** | **494.36** | **69.24** | **86.51** | **74.06** | **61.43** | **4.77** | **22.05** | **812.42** |

6. 2015–16ನೇ ಸಾಲಿನ ಜನವರಿ 2016ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ತೆರಿಗೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ಎಪಿಡಿಆರ್‌ಪಿ ಸಾಲಗಳ ಅಸಲು ಮರುಪಾವತಿ ಮತ್ತು ಎಪಿಡಿಆರ್‌ಪಿ ಸಾಲಗಳ ಮೇಲಿನ ಬಡ್ಡಿ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಮತ್ತು ರಾಜಧನದ ಮೊತ್ತ ರೂ. 93.04 ಕೋಟಿಗಳನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**ರೂ. ಕೋಟಿಗಳಲ್ಲಿ**

| ಕ್ರಸಂ | ವಿಸಕಂ | ಜನವರಿ 2016 |
|---|---|---|
| 1 | ಬೆವಿಕಂ | **51.94** |
| 2 | ಮವಿಕಂ | **9.05** |
| 3 | ಹುವಿಕಂ | **9.66** |
| 4 | ಗುವಿಕಂ | **8.88** |
| 5 | ಚಾವಿಸನಿನಿ | **9.85** |
| 6 | ಕವಿಪ್ರನಿನಿ | **0.18** |
| 7 | ಕವಿನಿನಿ | **0.57** |
| | **ಒಟ್ಟು** | **90.13** |
| 8 | ಕವಿಪ್ರನಿನಿ (APDRP Principale) | **0.59** |
| 9 | ಕವಿಪ್ರನಿನಿ (APDRP Interest) | **0.51** |
| 10 | ಕವಿಪ್ರನಿನಿ (ರಾಜಧನ) | **1.81** |
| | **ಒಟ್ಟು** | **93.04** |

7. ಮೇಲೆ ವಿವರಿಸಿರುವಂತೆ, ಜನವರಿ 2016ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ, ರಾಜಧನ ಮತ್ತು ಎಪಿಡಿಆರ್‌ಪಿ ಸಾಲಗಳ ಅಸಲು ಮರುಪಾವತಿ ಮತ್ತು ಎಪಿಡಿಆರ್‌ಪಿ ಸಾಲಗಳ ಮೇಲಿನ ಬಡ್ಡಿ ಪಾವತಿ ಮೊತ್ತದ ಬಾಬ್ತು ರೂ. 93.04 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 06 ಪಿಎಸ್‌ಆರ್ 2015/ಪಿ2, ಬೆಂಗಳೂರು, ದಿನಾಂಕ: 02–03–2016**

1. 2015–16ನೇ ಸಾಲಿನ ಜನವರಿ 2016ರ ಮಾಹೆಗೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರ ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಬಾಬ್ತು ರೂ. **89.38 ಕೋಟಿಗಳನ್ನು (ಎಂಬತ್ತೊಂಬತ್ತು ಕೋಟಿ ಮೂವತ್ತೆಂಟು ಲಕ್ಷ ರೂ. ಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A: ESCOM's Portion** **(Rs. In crs)**

| DEBIT | | CREDIT | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCOMs** | | **Electricity Tax collection** | |
| 2801-80-101-1-04-106 | | 0043-00-101-0-01 | |
| BESCOM | 51.94 | BESCOM | 51.94 |

| | | | |
|---|---|---|---|
| MESCOM | 9.05 | MESCOM | 9.05 |
| HESCOM | 9.66 | HESCOM | 9.66 |
| GESCOM | 8.88 | GESCOM | 8.88 |
| CESC | 9.85 | CESC | 9.85 |
| **Total** | **89.38** | **Total** | **89.38** |

2. 2015–16ನೇ ಸಾಲಿನ ಜನವರಿ 2016ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ರೂ. 2.38 ಕೋಟಿಗಳನ್ನು ಸಹ ಸರ್ಕಾರವು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಕಲಬುರಗಿ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B. KPCL portion** **(Rs. In Crs)**

| **DEBIT** | | **CREDIT** | |
|---|---|---|---|
| **Head of Acount** | **Total Amount** | **Head of Account** | **Total Amount** |
| Subsidy to ESCOMs | | **Royality from KPCL** | |
| 2801-80-101-1-04-106 | | 0801-01—201-0-01 | 1.81 |
| GESCOM | 2.38 | | |
| | | **Electricity Tax** | |
| (KPCL to adjust this receipt against power purchase cost of GESCOM) | | 0043-00-101-0-01 | 0.57 |
| **TOTAL – (B)** | **2.38** | **TOTAL- (B)** | **2.38** |

3. 2015–16ನೇ ಸಾಲಿಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸಂದಾಯ ಮಾಡಬೇಕಾಗಿರುವ ರೂ. 1.28 ಕೋಟಿಗಳನ್ನು ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಸರ್ಕಾರ ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಸರಿಹೊಂದಿಸಿ ಬಿಡುಗಡೆ ಮಾಡಿ ಆದೇಶಿಸಿದೆ. ಕಲಬುರಗಿ ವಿದ್ಯುತ್ ಕಂಪನಿರವರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಪಾವತಿಸಬೇಕಾಗಿರುವ ಪ್ರಸರಣ ವೆಚ್ಚಕ್ಕೆ ಲೆಕ್ಕೀಕರಿಸುವುದು.

**C: KPTCL portion** **(Rs. In Crs)**

| **DEBIT** | | **CREDIT** | |
|---|---|---|---|
| **Head of Acount** | **Total Amount** | **Head of Account** | **Total Amount** |
| Subsidy to ESCOMs | | **Electricity Tax** | |
| 2801-80-101-1-04-106 | | 0043-00-101-0-01 | 0.18 |
| GESCOM | 1.28 | **Interest Payable to APDRP Loan** | |
| | | 0049-04-190-0-02 | 0.51 |
| | | **Principal Payable to APDRP Laon** | |
| | | 6801-00-205-1-102 | 0.59 |
| **TOTAL – (B)** | **1.28** | **TOTAL- (B)** | **1.28** |

ಮೇಲಿನ ಕೋಷ್ಟಕದಲ್ಲಿರುವಂತೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ, ಎಪಿಡಿಆರ್‌ಪಿ ಸಾಲಗಳ ಅಸಲು ಮರುಪಾವತಿ ಮತ್ತು ಎಪಿಡಿಆರ್‌ಪಿ ಸಾಲಗಳ ಮೇಲಿನ ಬಡ್ಡಿ ಮೊತ್ತ ರೂ. 1.28 ಕೋಟಿಗಳನ್ನು ಸರ್ಕಾರ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ.

ಕಲಬುರಗಿ ವಿದ್ಯುತ್ ಸರಬರಾಜು ಕಂಪನಿರವರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಪಾವತಿಸಬೇಕಾಗಿರುವ ಪ್ರಸರಣ ವೆಚ್ಚಕ್ಕೆ ಲೆಕ್ಕಿಕರಿಸುವುದು.

4. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ.ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.
5. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.
6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ ಮತ್ತು ರಾಜಸ್ವ ರೂ. 2.38 ಕೋಟಿಗಳನ್ನು ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.
7. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ ರೂ. 1.28 ಕೋಟಿಗಳನ್ನು ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ಕಲಬುರಗಿ ವಿದ್ಯುತ್ ಸರಬರಾಜು ಕಂಪನಿರವರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಪಾವತಿಸಬೇಕಾಗಿರುವ ಪ್ರಸರಣ ವೆಚ್ಚಕ್ಕೆ ಲೆಕ್ಕೀಕರಿಸುವುದು.
8. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.
9. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1466 ವೆಚ್ಚ–1/15 ದಿನಾಂಕ: 20–01–2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**P.R.237**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

## ಆರ್ಥಿಕ ಸಚಿವಾಲಯ

**ವಿಷಯ :** 'ಬಿ' ವರ್ಗದ ಕಲಬುರ್ಗಿ ನಗರಕ್ಕೆ ನಗರ ಪರಿಹಾರ ಭತ್ಯೆಯನ್ನು ನಿಗಧಿಪಡಿಸುವ ಬಗ್ಗೆ

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಆಇ 6 ಎಸ್‌ಆರ್‌ಪಿ 2015, ದಿನಾಂಕ : 04–07–2015

**ಪ್ರಸ್ತಾವನೆ :**

ಮಾನ್ಯ ಮುಖ್ಯ ಮಂತ್ರಿಗಳು 2015–16ರ ಆಯವ್ಯಯ ಭಾಷಣದಲ್ಲಿ ಮನೆ ಬಾಡಿಗೆ ಭತ್ಯೆಯ ಉದ್ದೇಶಕ್ಕಾಗಿ ರಾಜ್ಯದಲ್ಲಿನ ನಗರಗಳು ಹಾಗೂ ಗ್ರಾಮೀಣ ಪ್ರದೇಶಗಳನ್ನು 2011 ರ ಜನಗಣತಿಯ ಅಂಕಿ ಅಂಶಗಳ ಆಧಾರದ ಮೇಲೆ ಪುನಃ ವರ್ಗೀಕರಿಸುವ ಸರ್ಕಾರದ ನಿರ್ಧಾರವನ್ನು ಘೋಷಿಸಿದ್ದು ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ದಿನಾಂಕ 04–07–2015 ರ ಸರ್ಕಾರಿ ಆದೇಶದಲ್ಲಿ ಮನೆ ಬಾಡಿಗೆ ಭತ್ಯೆ ಉದ್ದೇಶಕ್ಕಾಗಿ ಕಲಬುರ್ಗಿ ನಗರ ಪಾಲಿಕೆಯನ್ನು ಒಳಗೊಂಡಂತೆ ಕೆಲವು ನಗರಗಳನ್ನು 'ಬಿ' ಪ್ರವರ್ಗಕ್ಕೆ ಒಳಪಡಿಸಿರುತ್ತದೆ. ಮನೆ ಬಾಡಿಗೆ ಭತ್ಯೆ ಉದ್ದೇಶಕ್ಕಾಗಿ 'ಬಿ' ವರ್ಗದ ನಗರವಾಗಿ ಘೋಷಿಸಿರುವ ಕಲಬುರ್ಗಿ ನಗರ ಪಾಲಿಕೆಗೆ ನಗರ ಪರಿಹಾರ ಭತ್ಯೆ (CCA) ನೀಡುವಂತೆ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘವು ಮನವಿ ಮಾಡಿರುತ್ತದೆ. ಈ ಕೋರಿಕೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 07 ಎಸ್‌ಆರ್‌ಪಿ 2016, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2016**

ಕಲಬುರ್ಗಿ ನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ರಾಜ್ಯ ಸರ್ಕಾರಿ ನೌಕರರಿಗೆ ಈ ಕೆಳಕಂಡಂತೆ ನಗರ ಪರಿಹಾರ ಭತ್ಯೆಯನ್ನು ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

| ನಗರ | ಸರ್ಕಾರಿ ನೌಕರರು ಸೇರಿದ ಗುಂಪು | ನಗರ ಪರಿಹಾರ ಭತ್ಯೆಯ ದರ ಮಾಸಿಕ |
|---|---|---|
| ಕಲಬುರ್ಗಿ ಮಹಾನಗರ ಪಾಲಿಕೆ | ಸಿ &ಡಿ | ರೂ. 250 |
| | ಎ & ಬಿ | ರೂ. 300 |

ಈ ಆದೇಶವು ದಿನಾಂಕ: 01–04–2016 ರಿಂದ ಜಾರಿಗೆ ಬರುತ್ತದೆ.

**P.R.238**

**SC-500**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ರಾಜಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

**ಒಳಾಡಳಿತ ಸಚಿವಾಲಯ**

**ವಿಷಯ :** ಹೊಸದಾಗಿ ಸ್ಥಾಪಿತವಾಗಿರುವ ಬೆಂಗಳೂರಿನ ಮೂರು ಅಪರ ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳಲ್ಲಿ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಿಂದ ದಾಖಲಿಸುವ ಪ್ರಕರಣಗಳನ್ನು ನಿರ್ವಹಿಸಲು ಸರ್ಕಾರಿ ಅಭಿಯೋಜಕರನ್ನು ಮತ್ತು ಪೂರಕ ಸಿಬ್ಬಂದಿಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 04 ಎಲ್‌ಸಿಇ 2013, ದಿನಾಂಕ: 10-02-2016.
2. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಂ: ಲೋಕ್/ಆಡಳಿತ-1/28/2011-12, ದಿನಾಂಕ:26-02-2016.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ1/347/2015-16, ದಿನಾಂಕ: 27-02-2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಭ್ರಷ್ಟಾಚಾರ ನಿರ್ಮೂಲನ ಕಾಯ್ದೆಯಡಿ ದಾಖಲಾಗುವ ಪ್ರಕರಣಗಳಿಗೆ ಸಂಬಂಧಿಸಿದಂತೆ ಬೆಂಗಳೂರಿನಲ್ಲಿ ಮೂರು ಹೊಸದಾಗಿ 76, 77, 78ನೇ ಅಪರ ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿ ಸದರಿ ಮೂರು ನ್ಯಾಯಾಲಯಗಳಿಗೆ ಒಬ್ಬೊಬ್ಬರಂತೆ ಮೂವರು ಸರ್ಕಾರಿ ಅಭಿಯೋಜಕರನ್ನು ನೇಮಿಸುವಂತೆ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿ ಬೆಂಗಳೂರು ನಗರದಲ್ಲಿ 76, 77, ಮತ್ತು 78ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳಲ್ಲಿ (ಭ್ರಷ್ಟಾಚಾರ ನಿರ್ಮೂಲನ ಕಾಯ್ದೆಯಡಿ ಪ್ರಕರಣಗಳ ವಿಚಾರಣೆಗಾಗಿ) ಸೃಜನೆ ಮಾಡಲಾಗಿರುವ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಈ ಕೆಳಕಂಡ ಪೂರಕ ಸಿಬ್ಬಂದಿಗಳನ್ನು ಸೃಜಿಸಲು ಹಾಗೂ ಸದರಿ ಹುದ್ದೆಗಳ ವೆಚ್ಚವನ್ನು 2014-ನ್ಯಾಯ ಪರಿಪಾಲನೆ-00-114- ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು-0-02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಲೆಕ್ಕ ಶೀರ್ಷಿಕೆಯಿಂದ ಭರಿಸಲಾಗುವುದೆಂದು ಹಾಗೂ ಪೀಠೋಪಕರಣಗಳಿಗೆ ತಗಲುವ ಅಂದಾಜು ವೆಚ್ಚದ ಪಟ್ಟಿಯೊಂದಿಗೆ (ಅನಾವರ್ತಕ ವೆಚ್ಚ ರೂ. 1,11,100-00) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| **1** | **2** | **3** |
| 1 | ಸರ್ಕಾರಿ ಅಭಿಯೋಜಕರು | 3 |
| 2 | ಅಧೀಕ್ಷಕರು | 3 |
| 3 | ಪ್ರಥಮ ದರ್ಜೆ ಸಹಾಯಕರು | 3 |
| 4 | ಶೀಘ್ರಲಿಪಿಗಾರರು | 3 |
| 5 | ಅಟೆಂಡರ್ | 3 |
| 6 | ದಲಾಯತ್ | 3 |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 66 ಪಿಪಿಇ 2016, ಬೆಂಗಳೂರು, ದಿನಾಂಕ: 02ನೇ ಮಾರ್ಚ್ 2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರದಲ್ಲಿ 76, 77 ಮತ್ತು 87ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳಲ್ಲಿ (ಭ್ರಷ್ಟಾಚಾರ ನಿರ್ಮೂಲನ ಕಾಯ್ದೆಯಡಿ ಪ್ರಕರಣಗಳ ವಿಚಾರಣೆಗಾಗಿ) ಸೃಜನೆ ಮಾಡಲಾಗಿರುವ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಈ ಕೆಳಕಂಡ ಪೂರಕ ಸಿಬ್ಬಂದಿಗಳನ್ನು ಸೃಜಿಸಿದೆ.

| ಕ್ರ ಸಂ. | ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| **1** | **2** | **3** |
| 1 | ಸರ್ಕಾರಿ ಅಭಿಯೋಜಕರು | 3 |
| 2 | ಅಧೀಕ್ಷಕರು | 3 |
| 3 | ಪ್ರಥಮ ದರ್ಜೆ ಸಹಾಯಕರು | 3 |
| 4 | ಶೀಘ್ರಲಿಪಿಗಾರರು | 3 |
| 5 | ಅಟೆಂಡರ್ | 3 |
| 6 | ದಲಾಯತ್ | 3 |

ಕ್ರಮ ಸಂಖ್ಯೆ:05 ಮತ್ತು 06ರ ಅಟೆಂಡರ್ ಮತ್ತು ದಲಾಯತ್ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಲು ಸೂಚಿಸಿದೆ.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014=ನ್ಯಾಯಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: ಅ.ಇ. : 1062, ಪ್ರಕಾ. ದಿನಾಂಕ: 01–03–2016 ಸಹಮತಿಯನ್ವಯ ಹೊರಡಿಸಲಾಗಿದೆ.

**P.R.239**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
(ಪೊಲೀಸು ಸೇವೆಗಳು–ಬಿ)

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಎನ್. ಎಂ. ಶಿವಶಂಕರ್, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಇ 192 ಆಖಇ 2012 ದಿ: 09.11.2012.

2) ಅಪರ ನಿಬಂಧಕರು, ವಿಚಾರಣೆಗಳು–8, ಕರ್ನಾಟಕ ಲೋಕಾಯುಕ್ತ ಇವರು ಸಲ್ಲಿಸಿರುವ ವಿಚಾರಣಾ ವರದಿ ಪತ್ರ ಸಂಖ್ಯೆ : ಎಲ್ಓಕೆ/ಎಆರ್ಇ–8/14ಎ/ಇಎನ್ಕ್ಯೂ/474/2012 ದಿ:18.09.2015.

3) ಉಪ ಲೋಕಾಯುಕ್ತರ ಪತ್ರ ಸಂಖ್ಯೆ: ಎಲ್ಓಕೆ/ಎಆರ್ಇ–8/14ಎ/ಇಎನ್ಕ್ಯೂ/474/2012, ದಿ: 26.09.2015.

4) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಇ 192 ಆಖಇ 2012 ದಿ: 01.10.2015.

5) ಶ್ರೀ ಎನ್.ಎಂ. ಶಿವಶಂಕರ್ ಇವರು 2ನೇ ಕಾರಣ ಕೇಳುವ ನೋಟೀಸ್‌ಗೆ ನೀಡಿದ ಉತ್ತರ ದಿ:06.11.2015.

6) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 229 ಸಿಎನ್ಎಸ್ 2015 ದಿ: 22.01.2016.

**ಪ್ರಸ್ತಾವನೆ :–**

ಶ್ರೀ ಎನ್.ಎಂ. ಶಿವಶಂಕರ್ ಇವರು ಉಪ ಖಜಾನೆ, ಬ್ರಹ್ಮಾವರದಲ್ಲಿ ಉಪ ಖಜಾನಾಧಿಕಾರಿಯಾಗಿ (ಮುಖ್ಯ ಲೆಕ್ಕಿಗರು) ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ರಾಜಶೇಖರ ಹೆಬ್ಬಾರ ಸಿ., ಪ್ರಾಂಶುಪಾಲರು, ಶ್ರೀಮತಿ ರುಕ್ಮಿಣಿ ಶೆಡ್ತಿ ಸ್ಮಾರಕ ನ್ಯಾಷನಲ್ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾರ್ಕೂರು, ಉಡುಪಿ ಜಿಲ್ಲೆ ಇವರಿಂದ ಇವರ ಕಾಲೇಜಿನ ಮಾರ್ಚ್ ತಿಂಗಳ ಸುಮಾರು ರೂ. 28 ಲಕ್ಷಕ್ಕೂ ಮಿಕ್ಕಿದ ಮೌಲ್ಯದ ಬಿಲ್ಲುಗಳನ್ನು ತೀರ್ಣಗೊಳಿಸಲು ದಿ: 24.03.2011 ರಂದು ರೂ. 16,000/– ಗಳ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗಲೇ ಲೋಕಾಯುಕ್ತ ಪೋಲೀಸರಿಗೆ ಸಿಕ್ಕಿಬಿದ್ದ ಆರೋಪಕ್ಕಾಗಿ (1) ರಲ್ಲಿ ಒದಲಾದ ದಿ: 09.11.2012ರ ಸರ್ಕಾರಿ ಆದೇಶದಲ್ಲಿ ಸಿ.ಸಿ.ಎ. ನಿಯಮ (14(ಎ) ರನ್ವಯ ಇಲಾಖಾ ವಿಚಾರಣೆಯನ್ನು ಉಪ ಲೋಕಾಯುಕ್ತರಿಗೆ ವಹಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು, ವಿಚಾರಣೆಗಳು–8, ಕರ್ನಾಟಕ ಲೋಕಾಯುಕ್ತ ಇವರು ವಿಚಾರಣೆ ನಡೆಸಿ ಮೇಲೆ (2) ರಲ್ಲಿ ಓದಲಾದ ದಿ: 18.09.2015ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

" ಶಿಸ್ತು ಪ್ರಾಧಿಕಾರದ ಪರ/ಸಾಕ್ಷಿಯಾದ ಫಿರ್ಯಾದುದಾರರು ಸಾಕ್ಷ್ಯ ನೀಡಿ ತಾವು ಉಡುಪಿಯ ಬಾರಗೂರಿನ ಶ್ರೀಮತಿ ರುಕ್ಮಿಣಿ ದೇವಿ ಶೇಡ್ತಿ ಸ್ಮಾರಕ ಸರ್ಕಾರಿ ರಾಷ್ಟ್ರಿಯ ಪ್ರಥಮ ದರ್ಜೆ ಕಾಲೇಜಿನ ಪ್ರಿನ್ಸಿಪಲ್ ಆಗಿದ್ದು, ಕಾಲೇಜಿಗೆ ಸಂಬಂಧಿಸಿದ ₹.28 ಲಕ್ಷಗಳ ಮೊತ್ತದ ಬಿಲ್ಲನ್ನು ಆರೋಪಿತರು ಕೆಲಸ ಮಾಡುವ ಬ್ರಹ್ಮಾವರ ಖಜಾನೆಗೆ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಉಪ ಖಜಾನೆಯಲ್ಲಿ ಬಿಲ್‌ಪಾಸ್ ಆಗದ ಕಾರಣ ಆರೋಪಿತರನ್ನು ಆಗಿದ್ದಾಂಗ್ಗೆ ಭೇಟಿ ಮಾಡುತ್ತಿದ್ದು, ಅವರು ಬಿಲ್ ಪಾಸ್ ಮಾಡಲು ಶೇ.1 ರಂತೆ ರೂ. 28.000/–ಗಳ ಅಕ್ರಮ ಸಂಭಾವನೆಗೆ ಒತ್ತಾಯಿಸುತ್ತಿದ್ದರು. ಚೌಕಾಶಿಯ ನಂತರ ರೂ. 16,000/–ಕ್ಕೆ ಒಪ್ಪಿದ್ದರು. ಆದರೆ ಇಷ್ಟವಿಲ್ಲದೆ ತಾನು ಉಡುಪಿ ಲೋಕಾಯುಕ್ತ ಪೋಲೀಸು ಠಾಣೆಯ ಇನ್ಸ್‌ಪೆಕ್ಟರ್‌ನ್ನು ದಿ:22.03.2011 ರಂದು ಕಾಣಲಾಗಿ ಅವರು ವಾಯ್ಸ್ ರೆಕಾರ್ಡ್‌ರ್ ನೀಡಿದ ಮೇರೆಗೆ ಆಪಾದಿತರು ಅಕ್ರಮ ಸಂಭಾವನೆ ಕೇಳಿದ್ದನ್ನು ಅದರಲ್ಲಿ ರೆಕಾರ್ಡ್ ಮಾಡಿ ಲಿಖಿತ ದೂರಿನೊಡನೆ ದಿ: 24.03.2011 ರಂದು ಅದನ್ನು ಹಿಂತಿರುಗಿಸಿದೆನೆಂದು ತಿಳಿಸಿದ್ದಾರೆ. ನೆರಳು ಸಾಕ್ಷಿ ಮತ್ತು ಪಂಚ ಸಾಕ್ಷಿ ಕರೆಸಿದ ತನಿಖಾಧಿಕಾರಿಯು ತಾವು ಹಾಜರುಪಡಿಸಿದ 1 ಸಾವಿರ ಮೌಲ್ಯದ 16 ನೋಟುಗಳಿಗೆ ಪಿನಾಪ್ತಲಿನ್ ಪುಡಿ ಲೇಪಿಸಿ ಅವುಗಳ ಸಂಖ್ಯೆ ನಮೂದಿಸಿಕೊಂಡು ಸೂಕ್ತ ಸೂಚನೆಗಳನ್ನು ನೀಡಿದರು.

ತನಿಖಾಧಿಕಾರಿಗಳೊಡನೆ ಬ್ರಹ್ಮಾವರ ಉಪ ಖಜಾನೆಗೆ ಬಂದು ತಾನು ಹಾಗೂ ನೆರಳು ಸಾಕ್ಷಿ ಇಬ್ಬರೂ ಆಪಾದಿತರ ಬಳಿ ಹೋದಾಗ ಅವರು ಅಕ್ರಮ ಸಂಭಾವನೆ ಕೇಳಿದರು. ತಾನು ಕಡಿಮೆ ಮಾಡಿಕೊಳ್ಳುವಂತೆ ಕೋರಿದಾಗ ಒಪ್ಪಲಿಲ್ಲ. ನಂತರ ತಾನು 1 ಸಾವಿರದ 16 ನೋಟುಗಳನ್ನು ನೀಡಲಾಗಿ ಅದನ್ನು ತೆಗೆದುಕೊಂಡು ಪ್ಯಾಂಟಿನ ಬಲ ಜೇಬಿನಲ್ಲಿರಿಸಿಕೊಂಡರು. ಆನಂತರ ತಾನು ಹೊರಬಂದು ತನಿಖಾಧಿಕಾರಿಗೆ ಸನ್ನೆ ಮಾಡಲಾಗಿ ಅವರು ತಮ್ಮ ಸಿಬ್ಬಂದಿಯೊಡನೆ ಸ್ಥಳಕ್ಕೆ ಬಂದರು. ನಡೆದುದೆಲ್ಲವನ್ನೂ ತಾನು ತಿಳಿಸಿ ಆರೋಪಿತರನ್ನು ತೋರಿಸಿ ವಾಯ್ಸ್ ರೆಕಾರ್ಡ್‌ರನ್ನು ತನಿಖಾಧಿಕಾರಿಗೆ ಹಸ್ತಾಂತರಿಸಿದೆನು. ಅವರು ಪ್ಲೇ ಮಾಡಲಾಗಿ ಅದರಲ್ಲಿ ಆರೋಪಿತರ ಅಕ್ರಮ ಸಂಭಾವನೆ ಕೇಳಿದ್ದು ಆಲಿಸಲ್ಪಟ್ಟಿತು. ನಂತರ ಆರೋಪಿತರ ಬಲಗೈ ಹಾಗೂ ಪ್ಯಾಂಟಿನ ಬಲಭಾಗದ ಜೇಬುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ತೊಳೆಯಲಾಗಿ ಅದೆಲ್ಲವೂ ಸಕಾರಾತ್ಮಕ ಫಲಿತಾಂಶವನ್ನೇ ಕೊಟ್ಟವು. ಅಕ್ರಮ ಸಂಭಾವನೆಯ ಹಣದ ಸಂಖ್ಯೆಯು ಹೊಂದಾಣಿಕೆ ಆಯಿತೆಂದು ಸಾಕ್ಷ್ಯ ನೀಡಿದ್ದಾರೆ. ನೆರಳು ಸಾಕ್ಷಿ ಹಾಗೂ ತನಿಖಾಧಿಕಾರಿಯೂ ಸಹ 2 ಮತ್ತು 3ನೇ ಸಾಕ್ಷಿಗಳಾಗಿ ಇದೇ ರೀತಿ ಹೇಳಿಕೆಗಳನ್ನು ನೀಡಿದ್ದಾರೆ.

ಮೇಲಿನ ಹೇಳಿಕೆಗಳಿಗೆ ಪ್ರತಿಯಾಗಿ ಆಪಾದಿತರೂ ಸಹ ಸ್ವಯಂ ಸಾಕ್ಷ್ಯ ನೀಡಿ ತನ್ನನ್ನು ಬಡ್ತಿಯಿಂದ ವಂಚಿಸುವ ಸಂಚಿನೊಡನೆ ದಿ: 24.03.2011ರಂದು ಫಿರ್ಯಾದುದಾರರು ತನ್ನಲ್ಲಿಗೆ ಬಂದು ಅಕ್ರಮ ಸಂಭಾವನೆಯ ಮೊತ್ತವನ್ನು ಬಲವಂತವಾಗಿ ತನ್ನ ಪ್ಯಾಂಟಿನ ಬಲ ಜೇಬಿಗೆ ತುರುಕಿದರು. ಆದರೆ ಫಿರ್ಯಾದುದಾರರ ಬಿಲ್‌ಗಳನ್ನು ತಾನು ರಜೆಯಲ್ಲಿದ್ದ ದಿ: 17.03.2011ರಿಂದ ದಿ: 19.03.2011ರ ನಡುವಿನ ಅವಧಿಯಲ್ಲೇ

ತೀರ್ಣಗೊಳಿಸಲಾಗಿತ್ತು. ಫಿರ್ಯಾದಿಯು ದಿ: 22.03.2011ರಂದು ತನ್ನಲ್ಲಿಗೆ ಬಂದಾಗ ತಾನೆ ಚೆಕ್ ನೀಡಿದ್ದೆ. ಅದು ಟ್ರ್ಯಾಪ್ ನಡೆದ ದಿ: 24.03.2011ರಂದು encash ಕೂಡ ಆಗಿತ್ತು ಎಂದು ತಿಳಿಸಿದ್ದಾರೆ.

ಆಪಾದಿತರ ಪರವಾಗಿ ಮಾಡಲಾದ ಪಾಟೀ ಸವಾಲಿಗೆ ನೀಡಿದ ಉತ್ತರದಲ್ಲೂ ಸಹ ಸಾಕ್ಷಿಗಳು ತಮ್ಮ ನಿಲುವನ್ನು ಬದಲಾಯಿಸಿ ಕೊಂಡಿರುವುದಿಲ್ಲ, ದಿ: 22.03.2011 ರಂದು ಅಕ್ರಮ ಸಂಭಾವನೆ ಕೇಳಿದಾಗ ಅಂದೇ ಏಕೆ ದೂರನ್ನು ನೀಡಲಿಲ್ಲ ಎಂಬ ಪ್ರಶ್ನೆಯನ್ನು ಆಪಾದಿತರ ಪರವಾಗಿ ಮುಂದಿಟ್ಟು ದಿ: 24.03.2011 ರಂದು ಫಿರ್ಯಾದಿಯ ಯಾವ ಕೆಲಸವೂ ಬಾಕಿ ಇರದಿದ್ದ ಕಾರಣ ಅಕ್ರಮ ಸಂಭಾವನೆ ಸ್ವೀಕರಿಸುವ ಪ್ರಶ್ನೆ ಉದ್ಭವಿಸುವುದಿಲ್ಲ ಎಂಬ ವಾದವನ್ನು ಮಂಡಿಸಲಾಗಿದೆ.

ಈ ಪ್ರಕರಣದಲ್ಲಿ ಆಪಾದಿತರು ಟ್ರ್ಯಾಪ್ ನಡೆದ ದಿ:24.03.2011 ರಂದು ಕಚೇರಿಯಲ್ಲಿದ್ದರು. ಪ್ರಶ್ನಿತ ರೂ. 16,000/–ದ ನೋಟುಗಳನ್ನು ಆಪಾದಿತರಿಂದ ಅಂದು ವಶಪಡಿಸಿಕೊಳ್ಳಲಾಯಿತು ಎಂಬ ಅಂಶಗಳು ವಿವಾದಕ್ಕೆ ಹೊರತಾದವುಗಳಾಗಿವೆ. ಆಪಾದಿತರು ಅಕ್ರಮ ಸಂಭಾವನೆ ಕೇಳಿ ಪಡೆದರೋ ಅಥವಾ ಫಿರ್ಯಾದುದಾರರು ಅದನ್ನು ಬಲವಂತವಾಗಿ ಆಪಾದಿತರಿಗೆ ನೀಡಿದರೋ ಎಂಬುದನ್ನು ಪರಿಶೀಲಿಸಲಾಗಿ ಶಿಸ್ತು ಪ್ರಾಧಿಕಾರದ ಪರವಾಗಿ ಒಂದನೇ ಮತ್ತು ಎರಡನೇ ಸಾಕ್ಷಿಗಳು ಮುಖ್ಯ ವಿಚಾರಣೆ ಹಾಗೂ ಪಾಟೀ ಸವಾಲಿನಲ್ಲಿ ತಿಳಿಸಿರುವಂತೆ ದಿ: 22.03.2011 ರಂದು ಫಿರ್ಯಾದಿಗೆ ಆರೋಪಿತರು ಚೆಕ್ ನೀಡಿರಲಿಲ್ಲ. ಅಂದು ಚೆಕ್‌ಗಳನ್ನು ಬರೆಯಲಾಗಿತ್ತಷ್ಟೇ. ಚೆಕ್ಕನ್ನು 23 ಅಥವಾ 24 ರಂದು ನೀಡಲಾಗಿದೆ. ತಾನು 22 ಅಥವಾ 23 ರಂದು ಫಿರ್ಯಾದಿಗೆ ಚೆಕ್ ಪಾವತಿಸಿದ್ದೇನೆ ಎಂಬುದಕ್ಕೆ ಆರೋಪಿತರು ಯಾವುದೇ ಸಾಕ್ಷ್ಯವನ್ನು ಹಾಜರುಪಡಿಸಿಲ್ಲ. ಸಾಕ್ಷಿಗಳು ದ್ವೇಷದಿಂದ ತಮ್ಮ ಭವಿಷ್ಯವನ್ನು ಹಾಳುಗೆಡವಲು ಅಕ್ರಮ ಸಂಭಾವನೆಯ ಕತೆ ಹೆಣೆದರು ಹಾಗೂ ಬಲವಂತವಾಗಿ ಲಂಚದ ಹಣವನ್ನು ತನ್ನ ಪ್ಯಾಂಟಿನ ಬಲ ಜೇಬಿನಲ್ಲಿ ತುರುಕಿದರು ಎಂಬ ಆರೋಪಿತರ ವಾದವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ.

ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಲಾಗಿದ್ದು ಹಾಗೂ ಆರೋಪಿಗೆ ತಾವು ನಿರಪರಾಧಿ ಎಂಬ ಬಗ್ಗೆ ಸ್ಪಷ್ಟಪಡಿಸಲು ಸಾಕಷ್ಟು ಕಾಲಾವಕಾಶ ನೀಡಲಾಗಿರುತ್ತದೆ. ಪಿಡಬ್ಲ್ಯೂ–2 ಸಾಕ್ಷಿಯು ಸರ್ಕಾರಿ ನೌಕರರಾಗಿದ್ದು. ಅವರು ಆಪಾದಿತರ ವಿರುದ್ಧ ಯಾವುದೇ ದ್ವೇಷದ ಉದ್ದೇಶ ಹೊಂದಿದ್ದಾರೆಂದು ಹಾಗೂ ಆಪಾದಿತರನ್ನು ಈ ಪ್ರಕರಣದಲ್ಲಿ ಮಿಥ್ಯವಾಗಿ ಸಿಲುಕಿಸಲಾಗಿದೆ ಎಂಬುದಕ್ಕೆ ಯಾವುದೇ ಆಧಾರ ಕಂಡು ಬಂದಿರುವುದಿಲ್ಲ. ಫಿರ್ಯಾದುದಾರರು ಸರ್ಕಾರಿ ಕಾಲೇಜಿನ ಪ್ರಾಂಶುಪಾಲರಾಗಿದ್ದು, ಕಾಲೇಜಿನ ಬಿಲ್ಲುಗಳು ತೀರ್ಣವಾಗಿಲ್ಲವೆಂದು ಆಪಾದಿತರನ್ನು ಸಂಪರ್ಕಿಸುತ್ತಾರೆ. ಈ ಎಲ್ಲಾ ಸಂದರ್ಭಗಳನ್ನು ಹಾಗೂ ಸಾಕ್ಷ್ಯಗಳನ್ನು ಪರಿಶೀಲಿಸಿದಲ್ಲಿ ಆಪಾದಿತರ ಹೇಳಿಕೆಯನ್ನು ಅಂಗೀಕರಿಸಲು ಆಗದು. ಆದುದರಿಂದ ಒಂದನೇ ಸಾಕ್ಷಿದಾರರಾದ ಫಿರ್ಯಾದುದಾರರು ಮತ್ತು ಎರಡನೇ ಸಾಕ್ಷಿದಾರರಾದ ನೆರಳು ಸಾಕ್ಷಿ ಇವರ ಸಾಕ್ಷ್ಯಗಳು ನಂಬಲರ್ಹವಾವುಗಳಾಗಿವೆ.

ಅವರು ನೀಡಿರುವ ಸಾಕ್ಷ್ಯದ ಅನುಸಾರ ಆಪಾದಿತರು ಲಂಚವನ್ನು ಕೇಳಿ ಪಡೆದಿರುತ್ತಾರೆ. ಮುಖ್ಯ ಪಾಟೀ ಸವಾಲಿನಲ್ಲಿ ಸದರಿ ಸಾಕ್ಷ್ಯಗಳು ನೀಡಿದ ಹೇಳಿಕೆಯನ್ನು ನಿರಾಕರಿಸಿದ್ದರೂ ಅದು ಸ್ವಲ್ಪ ಮಟ್ಟಿನ ಆಧಾರ ರಕ್ಷಣಾತ್ಮಕ ಹೇಳಿಕೆಗೆ ಸಿಗಬಹುದಾದರೂ ಈ ಪ್ರಕರಣದಲ್ಲಿ ಸಂಭವನೀಯ ಪ್ರಾಬಲ್ಯತೆಯು ರುಜುವಾತಿಗೆ ಅಗತ್ಯವಿರುತ್ತದೆ. (The proof required is that of pre-ponderance of probability) ಸದರಿ ಲಂಚದ ಮೊತ್ತವನ್ನು ವಶಪಡಿಸಿಕೊಂಡಿರುವ ಬಗ್ಗೆ ತಕರಾರು ಇಲ್ಲದಿರುವುದರಿಂದ ಲಂಚ ಬೇಡಿಕೆ ಮತ್ತು ಸ್ವೀಕರಿಸುವಿಕೆಯು ನಂಬಲರ್ಹವಾಗಿದ್ದು, ಆಪಾದಿತರ ವಿರುದ್ಧದ ಆಪಾದನೆ ರುಜುವಾತಾಗಿರುತ್ತದೆ. ದಾಖಲೆಗಳ ಪರಿಶೀಲನೆ ಸಾಕ್ಷಿಗಳ ವಿಚಾರಣೆ ಅಲ್ಲದೇ ಆರೋಪಿತರ ಸಾಕ್ಷ್ಯಗಳಿಂದ ಆರೋಪಿತರು ಫಿರ್ಯಾದಿಯ ಕಾಲೇಜಿನ ₹.28. ಲಕ್ಷಗಳ ಬಿಲ್ ಚುಕ್ತಾ ಮಾಡಲು ₹.16 ಸಾವಿರ ಅಕ್ರಮ ಸಂಭಾವನೆಗೆ ಒತ್ತಾಯಿಸಿ ಅದನ್ನು ದಿ: 24.03.2011 ರಂದು ಪಡೆದು ಲೊಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿದ್ದರು ಎಂಬ ಆರೋಪ ಸಾಬೀತಾಗುತ್ತದೆ.

ಮೇಲಿನ ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಉಪ ಲೋಕಾಯುಕ್ತರು ಮೇಲೆ (3) ರಲ್ಲಿ ಒದಲಾದ ದಿ: 26.09.2015ರ ಶಿಫಾರಸ್ಸು ನೀಡಿದರು. ವಿಚಾರಣಾ ವರದಿ ಹಾಗೂ ಶಿಫಾರಸ್ಸಿನ ಪ್ರತಿಯೊಡನೆ ಆಪಾದಿತರಿಗೆ ಮೇಲೆ (4) ರಲ್ಲಿ ಓದಲಾದ ದಿ: 01.10.2015ರ 2ನೇ ಕಾರಣ ಕೇಳುವ ನೋಟೀಸನ್ನು ನೀಡಿ ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ನೋಟೀಸ್‌ಗೆ ಆರೋಪಿತರ ಅಧಿಕಾರಿಯು ಮೇಲೆ (5) ರಲ್ಲಿ ಒದಲಾದ ದಿ: 06.11.2015ರ ಉತ್ತರ ನೀಡಿ ಫಿರ್ಯಾದುದಾರರ ಬಿಲ್‌ಗಳನ್ನು ತಾನು ರಜೆಯಲ್ಲಿದ್ದಾಗ ಪ್ರಭಾರ ಅಧಿಕಾರಿಯು ದಿ: 22.03.2011 ತೀರ್ಣಗೊಳಿಸಿದ್ದರು ಹಾಗೂ ನಾನು ತಡಮಾಡದೇ ಬಿಲ್‌ಗಳನ್ನು ವಿಲೇವಾರಿ ಮಾಡಿದ್ದೆ. ಟ್ರ್ಯಾಪ್ ನಡೆದ ದಿ: 24.03.2011 ರಂದು ಫಿರ್ಯಾದುದಾರರ ಬಿಲ್‌ಗಳು ಬಾಕಿ ಇರಲಿಲ್ಲ. ಅದರಿಂದಾಗಿ ತಮ್ಮ ಕರ್ತವ್ಯ ನಿರ್ವಹಿಸಲು ಅಕ್ರಮ ಸಂಭಾವನೆ ಪಡೆದೆನೆಂದು ವಾದದಲ್ಲಿ ಹುರುಳಿಲ್ಲ ಎಂದಿದ್ದಾರೆ.

ವಾಯ್ಸ್ ರೆಕಾರ್ಡ್‌ನಲ್ಲಿನ ತಮ್ಮ ಧ್ವನಿ ಕುರಿತು ತಮ್ಮ ಆಕ್ಷೇಪಣೆ ಸಲ್ಲಿಸಿದ್ದು, ಅದನ್ನು ಸಾಬೀತು ಪಡಿಸಲು ಯಾವುದೇ ಕಾನೂನು ಸಮಮತ ಆಧಾರವನ್ನು ವಿಚಾರಣೆಯಲ್ಲಿ ಹಾಜರುಪಡಿಸಲಿಲ್ಲವೆಂದು, ಎರಡನೇ ಸಾಕ್ಷಿಯು ಸರ್ಕಾರಿ ನೌಕರರನಾಗಿದ್ದು ತನಿಖಾಧಿಕಾರಿಯ ಪ್ರಭಾವಕ್ಕೊಳಗಾಗಿ ತನ್ನನ್ನು ಅನ್ಯಾಯವಾಗಿ ಈ ಪ್ರಕರಣದಲ್ಲಿ ಸಿಕ್ಕಿಸಿದ್ದಾರೆ ಎಂದು ತಿಳಿಸಿದ್ದಾರೆ. ಒಂದನೇ ಸಾಕ್ಷಿಯು ತನಿಖಾಧಿಕಾರಿಯನ್ನು ಮುಂಚೆಯೇ ಭೇಟಿ ಮಾಡಿದ್ದರೂ ಸಹ ದಿ: 24.03.2011 ರವರೆಗೂ FIR ದಾಖಲಾಗಿಲ್ಲ ಎಂದು ಪ್ರತಿಪಾದಿಸಿದ್ದಾರೆ.

ಮೇಲಾಗಿ 2ನೇ ಸಾಕ್ಷಿಯು ತಮ್ಮ ಹಾಗೂ ಒಂದನೇ ಸಾಕ್ಷಿಯ ನಡುವೆ ನಡೆದ ಮಾತುಗಳನ್ನು ಸ್ಪಷ್ಟವಾಗಿ ಕೇಳಿಸಿಕೊಳ್ಳಲಿಲ್ಲವೆಂದು ಪಾಟೀಸವಾಲಿನಲ್ಲಿ ನುಡಿದಿದ್ದಾರೆ ಎಂದು ಫಿರ್ಯಾದುದಾರರಿಂದ ತಾವು ಯಾವುದೇ ಅಕ್ರಮ ಸಂಭಾವನೆಯನ್ನು ಕೇಳಲಿಲ್ಲವೆಂದು ತಮ್ಮ ವಿರುದ್ಧ ಸುಳ್ಳು ಸಾಕ್ಷ್ಯಗಳನ್ನು ಸೃಷ್ಟಿಸಿ ದ್ವೇಷದಿಂದ ಸಿಕ್ಕಿಸಲಾಗಿದೆ ಎಂದು ತಿಳಿಸಿದ್ದಾರೆ. ಬಲವಂತವಾಗಿ 16 ಸಾವಿರ ರೂ. ಗಳನ್ನು ತಮ್ಮ ಪ್ಯಾಂಟ್ ಜೇಬಿನಲ್ಲಿ ಇಡಲಾಗಿದೆ ಎಂದು ಹಾಗೂ ತಮ್ಮ ಮೇಲೆ ನಡೆದ ಫಿನಾಪ್ತಲಿನ್ ಪರೀಕ್ಷೆ ಕೂಡ ಸಂಶಯಾಸ್ಪದವಾಗಿಯೇ ಇದೆ ಎಂದು ತಿಳಿಸುತ್ತಾ ವಿಚಾರಣಾಧಿಕಾರಿಗಳೂ ಸಹ ತಮಗೆ ಮೌಖಿಕವಾಗಿ ವಾದ ಮಾಡಲು ಹಾಗೂ ಲಿಖಿತವಾಗಿ ವಾದ ಮಂಡಿಸಲು ಅವಕಾಶ ನೀಡದೇ ಉದ್ದೇಶಪೂರ್ವಕವಾಗಿ ತನ್ನನ್ನು ಸಿಲುಕಿಸಿ ವರದಿ ನೀಡಲಾಗಿದೆ ಎಂದು ಹೇಳಿಕೆ ನೀಡಿದ್ದಾರೆ.

ಫಿರ್ಯಾದುದಾರರು ಪಾಟೀ ಸವಾಲಿಗೆ ನೀಡಿದ ಉತ್ತರಗಳನ್ನು ನೋಡಿದ್ದಲ್ಲಿ ಅವರು ಸಾಚಾ ಸಾಕ್ಷಿಯಲ್ಲ ಎಂಬುದು ಕಂಡುಬರುತ್ತದೆ ಎಂದು, ಅವರು ಹಲವಾರು ವಾಸ್ತವಾಂಶಗಳನ್ನು ಮುಚ್ಚಿಟ್ಟಿದ್ದಾರೆ ಎಂದು ತಾವು ಮೂಲವಾಗಿ ಬಿಲ್‌ಗೆ ಆಕ್ಷೇಪಣೆ ಹಾಕಿದ್ದೆ ಎಂಬ ಕಾರಣಕ್ಕಾಗಿ ತಮ್ಮ ಪ್ಯಾಂಟ್ ಜೇಬಿನಲ್ಲಿ ಅಕ್ರಮ ಸಂಭಾವನೆಯ ಹಣವನ್ನು ಬಲವಂತವಾಗಿ ಇರಿಸಿ ತನ್ನನ್ನು ಸಿಲುಕಿಸಲಾಗಿದೆ ಎಂದು ತಿಳಿಸಿದ್ದಾರೆ. ಎರಡನೇ ಸಾಕ್ಷಿಯಾದ ನೆರಳು ಸಾಕ್ಷಿಯು ತಮ್ಮ ಕೊಠಡಿಯೊಳಗೆ ಬಂದೇ ಇರಲಿಲ್ಲವೆಂದು, ತಮ್ಮಿಬ್ಬರ ನಡುವೆ ನಡೆದ ಸಂಭಾಷಣೆಯನ್ನು ಆತ ಕೇಳಿಸಿಕೊಳ್ಳಲು ಸಾಧ್ಯವಿಲ್ಲವೆಂದು ಹಾಗೂ ಇದನ್ನು ಅವರೇ ಪಾಟೀ ಸವಾಲಿಗೆ ನೀಡಿದ ಉತ್ತರದಲ್ಲಿ ಒಪ್ಪಿಕೊಂಡಿದ್ದಾರೆ ಎಂದು ಪ್ರತಿಪಾದಿಸಿದರು. ಫಿರ್ಯಾದಿಯು ತಮ್ಮ ಮೇಲಿನ ದ್ವೇಷದಿಂದ ನನ್ನನ್ನು ಬಲಿ ಪಶು

ಮಾಡಿದ್ದಾರೆ. ದಿ: 22.03.2011 ರಂದೇ ಫಿರ್ಯಾದಿಗೆ ಚೆಕ್ ಹಸ್ತಾಂತರಿಸಲಾಗಿತ್ತು ಎಂದು, ತಾವು ಯಾವಾಗಲೂ ಅಕ್ರಮ ಸಂಭಾವನೆಗೆ ಒತ್ತಾಯಿಸಿ ಪಡೆಯಲಿಲ್ಲವೆಂದು, ತಾವು ಬಲವಂತವಾಗಿ ಇಟ್ಟ ಹಣವನ್ನು ಹಿಂತಿರುಗಿಸುತ್ತಿದ್ದಾಗ ಫಿರ್ಯಾದಿಯು ತನಿಖಾಧಿಕಾರಿ ಹಾಗೂ ನೆರಳು ಸಾಕ್ಷಿಯೊಡನೆ ಸಂಚು ನಡೆಸಿ ತಮ್ಮನ್ನು ಟ್ರಾಪ್‌ಗೆ ಸಿಲುಕಿಸಿದ್ದಾರೆ ಎಂದು ತಿಳಿಸುತ್ತ ತಮ್ಮ ಮೇಲೆ ನಡೆದ ಪಿನಾಪ್ತಲಿನ್ ಪರೀಕ್ಷೆಯೂ ಕೂಡ ಸಂಶಯಾಸ್ಪದವಾಗಿಯೇ ಇದೆ ಎಂದು ಪ್ರತಿಪಾದಿಸಿದ್ದಾರೆ.

ಮುಂದುವರೆದು, ವಿಚಾರಣಾಧಿಕಾರಿಗಳು ವಾಸ್ತವಾಂಶದ ಆಧಾರದ ಮೇಲೆ ಪ್ರಕರಣವನ್ನು ನಿಷ್ಪಕ್ಷಪಾತವಾಗಿ ವಿಶ್ಲೇಷಿಸದೇ, ನಿರಪರಾಧಿ ಎಂದು ಸಾಬೀತುಪಡಿಸುವ ಹೊರೆಯನ್ನು ತಮಗೆ ಹೊರಿಸಿ ತಮ್ಮ ಅಹವಾಲು, ವಾದ ಮಂಡನೆ, ಸಾಕ್ಷ್ಯದಾರಗಳನ್ನು ನಿರ್ಲಕ್ಷಿಸಿ ವರದಿ ನೀಡಿದ್ದಾರೆ ಎಂದು ತಿಳಿಸುತ್ತಾ, ಉಪ ಲೋಕಾಯುಕ್ತರು ಸಹ ತಮ್ಮ ವಾದಗಳಿಗೆ ಗಮನವನ್ನು ನೀಡದೇ ಶಿಫಾರಸ್ಸು ಮಾಡಿದ್ದಾರೆ ಎಂದು ಹೇಳಿಕೆ ನೀಡಿದ್ದಾರೆ. ಇದೇ ಆರೋಪಕ್ಕೆ ಸಂಬಂಧಿಸಿ ತಮ್ಮ ವಿರುದ್ಧ ಹೂಡಲಾದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 19/2012 ರಲ್ಲಿ ಉಡುಪಿ ಜಿಲ್ಲಾ ನ್ಯಾಯಾಲಯವು ದಿ: 24.11.2015ರ ಆದೇಶದಲ್ಲಿ ತಮ್ಮನ್ನು ಖುಲಾಸೆಗೊಳಿಸಿದೆ ಎಂಬುದನ್ನು ಗಮನಕ್ಕೆ ತರುತ್ತಾ, ವಿಚಾರಣಾಧಿಕಾರಿಗಳ ನಿರ್ಣಯ ಹಾಗೂ ಉಪ ಲೋಕಾಯುಕ್ತರ ಶಿಫಾರಸ್ಸನ್ನು ತಿರಸ್ಕರಿಸಿ ಪ್ರಕರಣವನ್ನು ಮುಕ್ತಾಯಗೊಳಿಸಲು ಕೋರಿದ್ದಾರೆ. ಆಪಾದಿತರ ಉತ್ತರವನ್ನು ಪರಿಶೀಲಿಸಲಾಗಿದೆ. ಪ್ರಕರಣದ ಮೂವರು ಸಾಕ್ಷಿಗಳ ವಿರುದ್ಧ ತಮ್ಮನ್ನು ಲೋಕಾಯುಕ್ತ ಬಲೆಗೆ ಕೆಡವಲು ಸಂಚು ಮಾಡಿದ ಆರೋಪ ಹೊರಿಸುವ ಆಪಾದಿತರು ಯಾವ ಕಾರಣಕ್ಕಾಗಿ ಈ ಸಂಚು ಮಾಡಲಾಗಿದೆ ಎಂಬುದನ್ನು ತಿಳಿಸುವುದಿಲ್ಲ, ಕೇವಲ ಬಿಲ್‌ಗೆ ಆಕ್ಷೇಪಿಸಿದರೆಂಬ ಕಾರಣಕ್ಕಾಗಿ ಯಾವುದೇ ಸರ್ಕಾರಿ ನೌಕರನು ಮತ್ತೊಬ್ಬ ಸರ್ಕಾರಿ ನೌಕರನ ವಿರುದ್ಧ ಷಡ್ಯಂತ್ರ ರೂಪಿಸಿ ಬಲಿಪಶು ಮಾಡುವುದಿಲ್ಲ ದಿ:22.03.2011 ಅಥವಾ ದಿ: 23.03.2011 ರಂದು ಫಿಯಾದಿಗೆ ಚೆಕ್ ನೀಡಿದೆ ಎಂಬುದಕ್ಕೆ ಆಪಾದಿತರು ಯಾವುದೇ ಪುರಾವೆಯನ್ನು ಒದಗಿಸಿಲ್ಲ.

ಎರಡನೇ ನೆರಳು ಸಾಕ್ಷಿಯು ತನ್ನ ಕೋಣೆಗೆ ಬಂದೇ ಇರಲಿಲ್ಲ ತನ್ನ ಹಾಗೂ ಫಿರ್ಯಾದಿಯ ನಡುವೆ ನಡೆದ ಮಾತುಕತೆಯನ್ನು ಕೇಳಿಸಿಕೊಂಡಿರುವ ಸಾಧ್ಯತೆಯೇ ಇಲ್ಲವೆಂದು ಪಾಟೀ ಸವಾಲಿನಲ್ಲಿ ಒಪ್ಪಿಕೊಂಡಿದ್ದಾರೆ ಎಂಬುದನ್ನು ಪರಿಗಣಿಸಲಾಗಿದೆ. ಮಾತುಕತೆ ಕೇಳಿಸಿಕೊಳ್ಳದಿದ್ದರೂ ಅಲ್ಲಿ ಏನು ನಡೆಯುತ್ತಿದೆ ಎಂಬುದು ಅವರಿಗೆ ಕಾಣುತ್ತಿತ್ತು. ಏಕೆಂದರೆ ಅದು ಗ್ಲಾಸ್ partition ಆಗಿತ್ತು. ಆದ್ದರಿಂದ, ತನ್ನ ಹಾಗೂ ಫಿರ್ಯಾದಿಯ ನಡುವೆ ನಡೆದ ವಿದ್ಯಾಮಾನಗಳು ಸಾಕ್ಷಿಗೆ ತಿಳಿಯಲಿಲ್ಲ ಎಂಬ ಆಪಾದಿತರ ವಾದವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಬಿಲ್ ಸಲ್ಲಿಸಿದಾಗಿನಿಂದ ದಿ: 24.03.2011 ರವರೆಗಿನ ವಿದ್ಯಾಮಾನಗಳನ್ನು ಗಮನಿಸಿದ್ದಲ್ಲಿ ಫಿರ್ಯಾದಿಯು ಹಲವಾರು ಬಾರಿ ಆಪಾದಿತರನ್ನು ಸಂಪರ್ಕಿಸಿರುವುದು, ಆಪಾದಿತರ ರಜೆ ಅವಧಿಯಲ್ಲಿ ಬಿಲ್ ತೀರ್ಣಗೊಂಡಿರುವುದು. ಅನಂತರವೂ ಫಿರ್ಯಾದಿಯು ಆಪಾದಿತರನ್ನು ಸತತವಾಗಿ ಟ್ರಾಪ್ ನಡೆದ ದಿ: 24.03.2011 ರವರೆಗೂ ಭೇಟಿ ಮಾಡುತ್ತಲೇ ಬಂದದ್ದು, ಇವುಗಳೊಡನೆ ದಿ: 24.03.2011 ರಂದು ಖಜಾನೆಯಲ್ಲಿ ನಡೆದ ವಿದ್ಯಾಮಾನಗಳು ಆಪಾದಿತರ ಅಕ್ರಮ ಸಂಭಾವನೆ ಒತ್ತಾಯ ಮಾಡಿರುವುದನ್ನೇ ಸೂಚಿಸುತ್ತವೆ

ಇವೆಲ್ಲಕಿಂತ ಮಿಗಿಲಾಗಿ ಟ್ರ್ಯಾಪ್ ಪೂರ್ವದಲ್ಲಿ ರಾಸಾಯನಿಕ ಲೇಪದೊಡನೆ ಫಿರ್ಯಾದಿಯ ಜೇಬಿನಲ್ಲಿಟ್ಟ 16 ಸಾವಿರ ರೂಪಾಯಿಗಳ ಸಂಖ್ಯೆಯು ದಿ: 24.03.2011 ರಂದು ಟ್ರ್ಯಾಪ್ ನಡೆದ ನಂತರ ಆಪಾದಿತರಿಂದ ವಶಪಡಿಸಿಕೊಂಡ ಅದೇ ಮೊತ್ತ ನೋಟುಗಳಲ್ಲಿನ ಸಂಖ್ಯೆಯೊಡನೆ ಹೊಂದಿಕೆ ಆಗಿದ್ದು, ಆಪಾದಿತರ ಪ್ಯಾಂಟಿನ ಬಲ ಜೇಬಿನ ರಾಸಾಯನಿಕ ಪರೀಕ್ಷೆ ಪಾಸಿಟಿವ್ ಆಗಿರುವುದು ಇವೆಲ್ಲವೂ ಆಪಾದಿತರಿಂದ ಅಕ್ರಮ ಸಂಭಾವನೆಯ ಬೇಡಿಕೆ ಹಾಗೂ ಅದನ್ನು ಪಡೆದಿರುವುದನ್ನು ಸಾಬೀತುಪಡಿಸುತ್ತವೆ. ಇನ್ನು ಕ್ರಿಮಿನಲ್ ಮೊಕದ್ದಮೆಯಲ್ಲಿ ಆಪಾದಿತರು ಖುಲಾಸೆಗೊಂಡಿರುವುದು ಈ ವಿಚಾರಣೆಯ ಮೇಲೆ ಬೀರುವ ಪರಿಣಾಮ ಕುರಿತಂತೆ ಕ್ರಿಮಿನಲ್ ಪ್ರಕರಣದ ಪ್ರಕ್ರಿಯೆ ಮತ್ತು ಇಲಾಖಾ ವಿಚಾರಣಾ ಪ್ರಕ್ರಿಯೆಗಳು ಬೇರೆ ಬೇರೆ ಸ್ವರೂಪವಾಗಿದ್ದು, ಒಂದಕ್ಕೊಂದು ಪ್ರತ್ಯೇಕವಾಗಿರುತ್ತದೆ. ಈ ಬಗ್ಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಈ ಕೆಳಕಂಡಂತೆ ತಿಳಿಸಿರುತ್ತದೆ.

"In Ajit Kumar Nag V. General Manager (PJ) Indian Oil Corporation Limited;- AIR 2005 SC 4217 it ws held by the Supreme Court that acquitial by a criminal court is not debar an employer from exercising power in accordance with Rules and Regulations in force. The two proceedings, criminal and departmental, are entirely different. They operate in different field and have different objectives. The object of the criminal trial is to inflict appropriate punishment on the offender. The object of the departmental proceeding is to deal with the delinquent departmentally and impose penalty in accordance with the service rules. In a Criminal trial incriminating statement made by the accused in certain circumstances or before certain officers is totally inadmissible in evidence. such strict rules of evidaence and procedure would not apply to departmental proceedings. The degree of proof which is necessary to order to conviction is different from the degree of proof necessary to record the commission of delinquency. The rules relating to appreciation of evidence in the two proceedings is also not similar. In criminal law, burden of proof is on the prosecution and unless the prosecution is able to prove the guilt of the accused beyond reasonable doubt be cannot convicted by a court of law. In a departmental enquiry penalty can be imposed on the delinquent officer on a finding recorded on the basis of preponderance of probability."

ಮೇಲಿನಂತೆಯೇ ಸ್ಟೇಟ್ ಆಫ್ ರಾಜಾಸ್ಥಾನ್ ವರ್ಸ್‌ಸ್ ಬಿ.ಕೆ.ಮೀನ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನ ಆಧಾರದ ಮೇಲೆ ಸುತ್ತೋಲೆ ಸಂಖ್ಯೆ: ಡಿಪಿಎಆರ್ 5 ಸೇಇವಿ 1996, ದಿ: 02.12.1997 ರಲ್ಲಿ ಸೂಚನೆಗಳನ್ನು ನೀಡಲಾಗಿದ್ದು ಅದರಂತೆ ಕ್ರಿಮಿನಲ್ ಮೊಕದ್ದಮೆ ಹಾಗೂ ಇಲಾಖಾ ವಿಚಾರಣೆಗಳನ್ನು ಸ್ವತಂತ್ರವಾಗಿ ಹೂಡಬಹುದಾಗಿದ್ದು ಒಂದರಲ್ಲಿನ ತೀರ್ಮಾನ ಮತ್ತೊಂದರ ಮೇಲೆ ಪರಿಣಾಮ ಬೀರುವುದಿಲ್ಲ. ಆದ್ದರಿಂದ, ಕ್ರಿಮಿನಲ್ ಮೊಕದ್ದಮೆಯಲ್ಲಿ ಆಪಾದಿತರು ಖುಲಾಸೆಗೊಂಡಿರುವುದಕ್ಕೂ ಈ ವಿಚಾರಣೆ ನಿರ್ಣಯಕ್ಕೂ ಸಂಬಂಧವಿಲ್ಲ. ಅಲ್ಲದೇ ಕ್ರಿಮಿನಲ್ ಮೊಕದ್ದಮೆಯಲ್ಲಿ ಇವರನ್ನು ಅರ್ಹತೆಯ ಆಧಾರದ ಮೇಲೆ ಆರೋಪಗಳಿಂದ ಖುಲಾಸೆ ಮಾಡಿರುವುದಿಲ್ಲ, ಶ್ರೀ ಎನ್.ಎಂ. ಶಿವಶಂಕರ್, ಮುಖ್ಯ ಲೆಕ್ಕಿಗರ ವಿರುದ್ಧ ಸಾಬೀತಾಗಿರುವ ಆರೋಪ ಅತ್ಯಂತ ತೀವ್ರವಾದುದಾಗಿದೆ. ತನ್ನ ಕರ್ತವ್ಯವನ್ನು ನಿರ್ವಹಿಸಲು ಕ್ರಮ ಸಂಭಾವನೆಗೆ ಒತ್ತಾಯಿಸಿದ ಹಾಗೂ ಅದನ್ನು ಪಡೆದ ವಾಸ್ತವಾಂಶವು ಒಬ್ಬ ಸರ್ಕಾರಿ ನೌಕರನಿಗೆ ನಿಗಧಿಪಡಿಸಿದ ನಡತೆ ನಿಯಮಕ್ಕೆ ತೀವ್ರ ವ್ಯತಿರಿಕ್ತವಾಗಿದೆ. ಇಂತಹ ತೀವ್ರ ದುರ್ನಡತೆ ಎಸಗಿದಂತಹಾ ಸರ್ಕಾರಿ ನೌಕರರನ್ನು ಸೇವೆಯಲ್ಲಿ ಉಳಿಸಿಕೊಳ್ಳುವುದು ಸೂಕ್ತವಲ್ಲ. ಒಂದು ವೇಳೆ ಇವರನ್ನು ಸೇವೆಯಲ್ಲಿ ಉಳಿಸಿಕೊಂಡಲ್ಲಿ ಅದು ತಪ್ಪು ಸಂದೇಶವನ್ನು ರವಾನಿಸುತ್ತದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಎನ್.ಎಂ. ಶಿವಶಂಕರ್, ಮುಖ್ಯ ಲೆಕ್ಕಿಗರ ಅಹವಾಲನ್ನು ಒಪ್ಪಿಕೊಳ್ಳದೇ ವಿಚಾರಣಾ ವರದಿ ಹಾಗೂ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ನಿರ್ಣಯಿಸಿ ಮುಂದಿನಂತೆ ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಆಇ 192 ಆಖಇ 2012, ಬೆಂಗಳೂರು ದಿನಾಂಕ: 1.03.2016.**

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8(Viii) ರಲ್ಲಿ ಪ್ರದತ್ತವಾಧ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎನ್.ಎಂ. ಶಿವಶಂಕರ್, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ (ಪ್ರಸ್ತುತ ಮುಖ್ಯ ಲೆಕ್ಕಿಗರು, ಹೊಳೆನರಸೀಪುರ ಉಪ ಖಜಾನೆ, ಹಾಸನ ಜಿಲ್ಲೆ) ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಈ ಮೂಲಕ ವಜಾಗೊಳಿಸುವ ದಂಡನೆಯನ್ನು ವಿಧಿಸುತ್ತದೆ.

**P.R.247**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಎ.ಕೆ. ವೈ. ಸೈಯದ್, ನಿವೃತ್ತ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು ಇವರ ವಿರುದ್ಧದ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಆಇ 33 ವಾತೆತ 2011 ದಿನಾಂಕ: 26.03.2012.
2) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 24.03.2013.
3) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಇ 33 ವಾತೆತ 2011 ದಿನಾಂಕ: 25.04.2013.
4) 2ನೇ ಕಾರಣ ಕೇಳುವ ನೋಟೀಸ್‌ಗೆ ಶ್ರೀ ಎ.ಕೆ. ವೈ. ಸೈಯದ್, ನಿವೃತ್ತ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರುರವರು ನೀಡಿರುವ ಸಮಜಾಯಿಸಿ ದಿ. 26.06.2013.
5) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ರವರ ಪತ್ರ ಸಂಖ್ಯೆ: ಪಿಎಸ್‌ಸಿ 190 ಸಿಎನ್‌ಎಸ್ 13, ದಿನಾಂಕ 29–9–2015.

**ಪ್ರಸ್ತಾವನೆ :–**

ಶ್ರೀ ಎ.ಕೆ.ವೈ. ಸೈಯದ್, ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ನಿವೃತ್ತ) ಇವರು ಹಿಂದೆ ಮೌಲ್ಯವರ್ಧಿತ ತೆರಿಗೆ ವಿಭಾಗ, ದಾವಣಗೆರೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಹೊಸಪೇಟೆಯ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಯ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಸಲ್ಲಿಸಿದ ತೆರಿಗೆ ಮರುಪಾವತಿ ಪ್ರಸ್ತಾವನೆಗಳಲ್ಲಿ ವರ್ತಕರು ಹಾಜರುಪಡಿಸಿದ ನಮೂನೆ 100ಕ್ಕೆ ಪೂರಕವಾಗಿ ನಮೂನೆ 'ಎಚ್' ಗಳನ್ನು ಸಲ್ಲಿಸದಿದ್ದರೂ ಸಹ ಅವುಗಳನ್ನು ವಾಣಿಜ್ಯ ತೆರಿಗೆ ಆಯುಕ್ತರ ದಿನಾಂಕ 2.3.1995ರ ಸುತ್ತೋಲೆ ಸಂಖ್ಯೆ 45/94–95 ರಲ್ಲಿನ ಸೂಚನೆಯಂತೆ ಪರಿಶೀಲನೆ ಮಾಡದೆ ಯಥಾವತ್ತಾಗಿ ಅನುಮೋದಿಸಿ ಮೇಲುರುಜು ಮಾಡಿ ಹಿಂತಿರುಗಿಸಿ ಬರೀ ಮೊತ್ತದ ತೆರಿಗೆಯನ್ನು ಮರುಪಾವತಿಸಿ ತೀವ್ರತರಹದ ದುರ್ನಡತೆಯನ್ನೆಸಗಿ ಸರ್ಕಾರಕ್ಕೆ ತೀವ್ರ ಆರ್ಥಿಕ ನಷ್ಟ ಉಂಟು ಮಾಡಿದ 2 ಆರೋಪಗಳಿಗಾಗಿ ಮತ್ತೊಬ್ಬರೊಡನೆ ಅವರ ವಿರುದ್ಧವೂ ಮೇಲೆ (1) ರಲ್ಲಿ ಓದಲಾದ ದಿನಾಂಕ: 26.03.2012ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಗಾಗಿ ಆದೇಶಿಸಿ ಶ್ರೀ ಕುಕ್ಕಜೆ ರಾಮಕೃಷ್ಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 24.03.2013ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿರುತ್ತಾರೆ ;

ಶಿಸ್ತು ಪ್ರಾಧಿಕಾರದ ಪರ ಎರಡನೇ ಸಾಕ್ಷಿಯು ಆಯುಕ್ತರ ನಿರ್ದೇಶನದ ಮೇರೆಗೆ ಹೊಸಪೇಟೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿಗೆ ಹೋಗಿ ಪ್ರಕರಣಕ್ಕೆ ಸಂಬಂಧಪಟ್ಟ ಕಡತಗಳನ್ನು ತಂದರು. ಅವರು ಹಾಜರುಪಡಿಸಿದ ದಾಖಲೆಗಳೆಂದರೆ 1) ಹೊಸಪೇಟೆಯ ಬಜಾವತ್ ಎಂಟರ್‌ಪ್ರೈಸಸ್‌ಗೆ ಸೇರಿದ ದಿನಾಂಕ 5–5–2010 ರೂ. 49,40,581/–ಗಳ ಮರುಪಾವತಿ ಆದೇಶ, 2) ಐಎಲ್‌ಸಿ ಇಂಡಸ್ಟ್ರೀಸ್ ರೂ. 1,33,91,898/– ಗಳು ದಿನಾಂಕ 25–03–2010ರ ಮರುಪಾವತಿ ಆದೇಶ; 3) ಎಂ.ಎಂ.ಇ. ಎಕ್ಸ್ ಪೋರ್ಟ್ಸ್‌ನ ದಿನಾಂಕ 11–06–2010ರ ಮರುಪಾವತಿ ಆದೇಶ; 4) ಮೆ: ಮಧು ಮಿನರಲ್ ಎಂಟರ್ ಪ್ರೈಸಸ್‌ನ ದಿನಾಂಕ 25–2–2010ರ ರೂ. 70,42,143/– ಗಳ ಮರಪಾವತಿ ಆದೇಶ; 5) ಅದೇ ಕಂಪನಿಯ ದಿನಾಂಕ 20–05–2010ರ ರೂ. 92,07,507/–ಗಳ ಮರುಪಾವತಿ ಆದೇಶ; 6) ಮೆ: ಶಾಂತದುರ್ಗ ಟ್ರಾನ್ಸ್ ಪೋರ್ಟ್ ಕಂಪನಿ ಪ್ರೈ.ಲಿ. ದಿನಾಂಕ 20–3–2010ರ ರೂ. 80,12,639/– ಗಳ ಮರುಪಾವತಿ ಆದೇಶ; 7) ಮೆ: ಮುನೀರ್ ಎಂಟರ್ ಪ್ರೈಸಸ್ ದಿನಾಂಕ 11–6–2010 55,24,947/– ರೂ.ಗಳ ಮರುಪಾವತಿ ಆದೇಶ ಇವುಗಳು. ಈ ಆದೇಶಗಳನ್ನು ಆರೋಪಿತರು ಕ್ರಮವಾಗಿ 9–6–2010, 11–6–2010, 1–4–2010 ಗಳೆಂದು ಮೇಲು ರುಜು ಮಾಡಿ ಹಿಂತಿರುಗಿಸಿದ್ದಾರೆಂದು ಸಾಕ್ಷ್ಯ ನೀಡಿ ಮರುಪಾವತಿ ಆದೇಶ ಹಾಗೂ ಆರೋಪಿತರ ಸಹಿಗಳನ್ನು ಗುರುತಿಸಿದ್ದಾರೆ. ಇವರನ್ನು ಆರೋಪಿತರ ಪರವಾಗಿ ಪಾಟೀ ಸವಾಲಿಗೆ ಒಳಪಡಿಸಿದಾಗ ಎಂ.ಎಂ.ಇ. ಎಕ್ಸ್‌ಪೋರ್ಟ್ ಪ್ರಕರಣದಲ್ಲಿ ಮರುಪಾವತಿ ಮೊತ್ತವು ಆರೋಪದಲ್ಲಿ ನಮೂದಿಸಿರುವಂತೆ ರೂ. 21.82,555/– ಅಲ್ಲ ಅದು ವಾಸ್ತವವಾಗಿ ರೂ. 31,62,555/– ಎಂದು ಹೇಳಿಸಲಾಯಿತು. ಆದಾಗ್ಯೂ ಫಾರಂ ಸಿ ಮತ್ತು ಎಚ್‌ಗಳನ್ನು ಪಡೆದ ನಂತರವೇ ಮರುಪಾವತಿ ಆದೇಶವನ್ನು ಸಲ್ಲಿಸುವುದು ಸರಿಯಾದ ಕ್ರಮವೆಂದು ತಿಳಿಸಿದರು. ಮುಂದುವರಿದಂತೆ ಪಾಟೀ ಸವಾಲಿನಲ್ಲಿ ಕಡತದಲ್ಲಿ ಲಭ್ಯವಿರುವ ಫಾರಂ ಸಿ ಮತ್ತು ಎಚ್‌ಗಳನ್ನು ಈ ಸಾಕ್ಷಿಯ ಮೂಲಕ ಗುರುತಿಸಿ ಮರುಪಾವತಿಯಲ್ಲಿ ಯಾವುದೇ ಅಕ್ರಮ ಆಗಿರುವುದಿಲ್ಲವೆಂದು ನುಡಿಸಲು ಪ್ರಯತ್ನಿಸಲಾಯಿತು. ಆದರೆ ಈ ಫಾರಂಗಳ ಯಾವತ್ತು ಕಡತದಲ್ಲಿ ಲಭ್ಯವಿದ್ದವೆಂದು ಸ್ಪಷ್ಟವಾಗಿ ನುಡಿಯಲು ಈ ಸಾಕ್ಷಿಗೆ ಸಾಧ್ಯವಾಗಲಿಲ್ಲ.

ಆಯುಕ್ತರ ದಿನಾಂಕ 23–7–2010ರ ಆದೇಶದ ಮೇರೆಗೆ ದಾವಣಗೆರೆ ವ್ಯಾಟ್ ವಿಭಾಗದಲ್ಲಿ ವ್ಯಾಟ್ ಮರುಪಾವತಿಗೆ ಸಂಬಂಧಿಸಿದಂತೆ ಜಂಟಿ ಆಯುಕ್ತರು 2010 ಏಪ್ರಿಲ್ ನಿಂದ ಜೂನ್ ವರೆಗೆ ಹೊರಡಿಸಿದ ಆದೇಶಗಳ ಬಗೆಗಿನ ದಾಖಲೆಗಳನ್ನು ಪರಿಶೀಲಿಸಿದ್ದಾಗಿ ಅಂದಿನ ವಾಣಿಜ್ಯ ತೆರಿಗೆ ಅಧಿಕಾರಿಯು ಶಿಸ್ತು ಪ್ರಾಧಿಕಾರ ಪರ ಮೂರನೇ ಸಾಕ್ಷಿಯಾಗಿ ನೀಡಿದ ಹೇಳಿಕೆಯಲ್ಲಿ ತಿಳಿಸಿದ್ದಾರೆ. ತಾವು ಜುಲೈ, ಆಗಸ್ಟ್ 2010ರಲ್ಲಿ ದಾಖಲೆಗಳನ್ನು

ಪರಿಶೀಲಿಸಿದಾಗ ಯಾವುದೇ ವ್ಯಾಪಾರೀ ಸಂಸ್ಥೆಗಳು ಫಾರಂ 'ಎಚ್' ಸಲ್ಲಿಸಿರಲಿಲ್ಲ. ಮರುಪಾವತಿ ಆದೇಶ ಹೊರಡಿಸಿದ ಎರಡು, ಮೂರು ತಿಂಗಳ ಒಳಗೆ ತಾನು ದಾಖಲೆಗಳನ್ನು ಪರಿಶೀಲಿಸಿದಾಗ ಈ ಫಾರಂಗಳು ಇರಲಿಲ್ಲ. ಮೇಲಾಗಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಈ ಕಂಪನಿಗಳಿಗೆ ಸಂಬಂಧಪಟ್ಟಂತೆ 'ಎಚ್' ಫಾರಂ ಹಾಗೂ ರಫ್ತು ದಾಖಲೆಗಳನ್ನು ಸಲ್ಲಿಸಬೇಕೆಂದು ನಿಬಂಧನೆಗೆ ಒಳಪಟ್ಟು ಮರುಪಾವತಿಗಳನ್ನು ಮಾಡಬಹುದೆಂದು ಸ್ಪಷ್ಟವಾಗಿ ನಮೂದಿಸಿದ್ದಾರೆ. ತಾನು ಜುಲೈ 26, 27 ಮತ್ತು ಆಗಸ್ಟ್ 3, 7 ಮತ್ತು 12 ರಂದು ಕಛೇರಿಗೆ ಹೋಗಿ ದಾಖಲೆಗಳನ್ನು ಪರಿಶೀಲಿಸಿದಾಗ ಈ ಯಾವ ಫಾರಂ 'ಎಚ್' ಗಳು ಅಲ್ಲಿ ಕಂಡು ಬರಲಿಲ್ಲ. ಈ ಬಗ್ಗೆ ತಾನು ಒಂದು ವರದಿಯನ್ನು ವಿವರದೊಡನೆ ಸಲ್ಲಿಸಿರುವುದಾಗಿ ಸಾಕ್ಷ್ಯ ನುಡಿದಿದ್ದಾರೆ.

ಆರೋಪಿತರು 1–7–2008 ರಿಂದ 20–6–2010 ರವರೆಗೆ ದಾವಣಗೆರೆ ವ್ಯಾಟ್ ವಿಭಾಗದಲ್ಲಿ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಾರೆಂದು ಒಂದನೇ ಸಾಕ್ಷಿಯ ದೃಢೀಕರಿಸಿದ್ದಾರೆ. ಎರಡನೇ ಸಾಕ್ಷಿಯು ಆರೋಪಿತರಿಂದ ಮೇಲುರುಜು ಮಾಡಲ್ಪಟ್ಟ ಮರುಪಾವತಿ ಆದೇಶಗಳನ್ನು ಗುರುತಿಸಿದ್ದಾರೆ. ಮೂರನೇ ಸಾಕ್ಷಿಯು ಆರೋಪಿತರು ಮೇಲು ರುಜು ಮಾಡಿದಾಗ ಕಡತಗಳಲ್ಲಿ ಫಾರಂ 'ಎಚ್'ಗಳು ಹಾಗೂ ರಫ್ತು ಮಾಡಿದ್ದಕ್ಕೆ ದಾಖಲೆಗಳು ಇರಲಿಲ್ಲವೆಂದು ದೃಢೀಕರಿಸಿದ್ದಾರೆ.

ಮೂರನೇ ಸಾಕ್ಷಿಯು ಹೊಸಪೇಟೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಕಛೇರಿಗೆ ಭೇಟಿ ನೀಡಿ ಪರಿಶೀಲಿಸದೇ ಕೇವಲ ಜಂಟಿ ಆಯುಕ್ತರು, ವ್ಯಾಟ್ ವಿಭಾಗ, ದಾವಣಗೆರೆಗೆ ಹೋಗಿ ದಾಖಲೆಗಳನ್ನು ಪರಿಶೀಲಿಸಿದ್ದಾರೆ. ಹಾಗಾಗಿ ಅವರಿಗೆ ದಾಖಲೆಗಳು ಸಿಗುವುದು ಸಾಧ್ಯವಾಗುವುದಿಲ್ಲ. ಹೊಸಪೇಟೆಯ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿಯ ಕಡತಗಳಲ್ಲಿ ದಾಖಲೆಗಳು ಇದ್ದವು ಎಂದು ಆರೋಪಿತರ ಪರವಾಗಿ ವಾದಿಸಲಾಯಿತು. ಇದನ್ನು 3ನೇ ಸಾಕ್ಷಿಯೂ ಕೂಡ ಒಪ್ಪಿಕೊಂಡಿದ್ದಾರೆ. ಹಾಗಿದ್ದರೂ ಸಹ ದಾಖಲೆಗಳು ಲಭ್ಯವಿದ್ದಿದ್ದಲ್ಲಿ ತಾವು ಮೇಲು ರುಜು ಮಾಡುವ ಸಮಯದಲ್ಲಾಗಲೀ ಅಥವಾ ಮರುಪಾವತಿ ಮಾಡುವ ಸಮಯದಲ್ಲಾಗಲೀ ಸದರೀ 'ಎಚ್ ಮತ್ತು 'ಸಿ' ಫಾರಂಗಳನ್ನು ವರ್ತಕರು ಹಾಜರುಪಡಿಸಿದ್ದು ಅದು ತನ್ನಲ್ಲಿ ಲಭ್ಯವಿದ್ದಲ್ಲಿ ಸಾಕ್ಷಿಗಳನ್ನು ಕೇಳುವುದಕ್ಕೆ ಬದಲಾಗಿ ಆರೋಪಿತರು ತಾವೇ ಸ್ವತಃ ಹಾಜರುಪಡಿಸಬಹುದಿತ್ತು. ಆಗ ಆರೋಪಿಗಳು ಸಾಬೀತಾಗುತ್ತಿರಲಿಲ್ಲ.

ಆರೋಪಿತರ ವಾದವೆಂದರೆ ಮರುಪಾವತಿಗೆ ಅರ್ಜಿ ಸಲ್ಲಿಸಿದ 35 ದಿನಗಳ ಒಳಗಾಗಿ ಮರುಪಾವತಿ ಆದೇಶ ಹೊರಡಿಸಬೇಕು ತಪ್ಪಿದ್ದಲ್ಲಿ ಕರದಾತರಿಗೆ ಆ ಹಣಕ್ಕೆ ಬಡ್ಡಿ ಕೊಡಬೇಕಾಗುತ್ತದೆ ಎಂಬುದು. ಹೌದು, ವ್ಯಾಟ್ ನಿಯಮದಲ್ಲಿ ಈ ರೀತಿಯ ಒಂದು ಉಪಬಂಧ ಇದೆ. ಅದರಂತೆ ವ್ಯಾಟ್‌ನ ಮರುಪಾವತಿ ಕೋರಿ ಅರ್ಜಿ ಸಲ್ಲಿಸಿದ 35 ದಿನಗಳ ಒಳಗಾಗಿ ಮರುಪಾವತಿ ಆದೇಶ ಹೊರಡಿಸಬೇಕು ಆದರೆ ಮರುಪಾವತಿ ದೇಶವನ್ನು ಹೊರಡಿಸಲು ಅಗತ್ಯವಾದ ದಾಖಲೆಗಳನ್ನು ಲಗತ್ತಿಸದೇ ಅರ್ಜಿ ಸಲ್ಲಿಸಲು ಕರದಾತರಿಗೆ ಇದು ಅವಕಾಶ ನೀಡುವುದಿಲ್ಲ.

ಆರೋಪಿತರು ತಮ್ಮ ರಕ್ಷಣಾತ್ಮಕ ಹೇಳಿಕೆ ಮಂಡಿಸಿ ಸಹಾಯಕ ಆಯುಕ್ತರು ಮರುಪಾವತಿ ಆದೇಶದಲ್ಲಿ ಈ ಮರುಪಾವತಿಯು ದಾವಣಗೆರೆ ಡಿವಿಏ ಆಡಿಟ್ ವಿಂಗ್‌ನ ಲೆಕ್ಕಪರಿಶೋಧನೆ ಹಾಗೂ ನಿಗದಿತ ಪ್ರಾಧಿಕಾರವು ಬಯಸಿದಾಗ 'ಎಚ್' ಫಾರಂಗಳು ಬಿಲ್ ಆಫ್ ಲ್ಯಾಂಡಿಂಗ್ ಮತ್ತು ಇತರ ದಾಖಲೆಗಳನ್ನು ಹಾಜರುಪಡಿಸಬೇಕೆಂಬ ನಿಬಂಧನೆಗೆ ಒಳಪಟ್ಟಿದೆ ಎಂಬ safety clause ನಮೂದಿಸಿದ್ದಾರೆ. ಇಂಗ್ಲೀಷ್‌ನಲ್ಲಿರುವ ಈ ಅಂಶವನ್ನು ತಪ್ಪಾಗೂ ಅರ್ಥೈಸಬಹುದು ಇಲ್ಲವೇ ತಪ್ಪಾಗಿ ಅರ್ಥ ಮಾಡಿಕೊಳ್ಳುವ ಸಾಧ್ಯತೆ ಇದೆ. ಬದಲಾಗಿ ಸಹಾಯಕ ಆಯುಕ್ತರು ವಾಣಿಜ್ಯ ತೆರಿಗೆ ಅವರು ಮರುಪಾವತಿ ಮೊತ್ತವನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಅನುಮೋದನೆಯ ನಂತರ ಪಾವತಿಸಬೇಕು ಹಾಗೂ ಆಂತರಿಕ ಲೆಕ್ಕಪರಿಶೋಧನೆ, ಮರುಮೌಲ್ಯಮಾಪನ, ಎಸ್‌ಎಂಆರ್ ಅಥವಾ ಮಹಾಲೇಖಪಾಲರ ಆಡಿಟ್‌ನಲ್ಲಿ ಮುಂದೆ ಕಂಡು ಹಿಡಿದಾಗ ವಸೂಲು ಮಾಡುವುದಕ್ಕೆಂದು ಒಳಪಟ್ಟಿರುತ್ತದೆ ಎಂದು ನಮೂದಿಸಬೇಕಿತ್ತು ಎಂದು ವಾದಿಸಿದ್ದಾರೆ. ಈ ರೀತಿಯ ನಿಲುವನ್ನು ತಳೆಯಲು ಸಾಧ್ಯವಿಲ್ಲ. ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ಸೇರಬೇಕಾದ ಅಪಾರ ಪ್ರಮಾಣದ ಹಣವನ್ನು ಒಳಗೊಂಡಿರುವ ವಿಷಯವು ವರ್ತಕರ ಕೊಡು–ಕೊಳ್ಳುವಿಕೆ ವ್ಯವಹಾರದಲ್ಲಿ ತೊಡಗಿಕೊಂಡಿರುವಾಗ, ಅದರಲ್ಲೂ ಅವುಗಳ ನಿರ್ವಹಣೆ ಕುರಿತು ಮುನ್ನೆಚ್ಚರಿಕೆ ಕ್ರಮವಾಗಿ ವಾಣಿಜ್ಯ ತೆರಿಗೆ ಆಯುಕ್ತರು ಸ್ಪಷ್ಟವಾದ ಸುತ್ತೋಲೆಗಳನ್ನು ಹೊರಡಿಸಿರುವಾಗ ವಾಣಿಜ್ಯ ತೆರಿಗೆ ಇಲಾಖೆಯ ಹಿರಿಯ ಅಧಿಕಾರಿಯ ಈ ನಿಲುವು ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳುವ ರೀತಿಯಲ್ಲದೇ ಬೇರೆನೂ ಇಲ್ಲ.

ರಿಟರ್ನ್‌ಗಳೊಡನೆ ಅತ್ಯಗತ್ಯವಾಗಿ ಸಲ್ಲಿಸಲೇಬೇಕಾದ 'ಎಚ್' ನಮೂನೆಗಳನ್ನು ಸಲ್ಲಿಸಬೇಕಿದ್ದಾಗ, ಆರೋಪಿತರು ಹೆಚ್ಚು ಜಾಗೃತರಾಗಿರಬೇಕಿತ್ತು. ನಿಬಂಧನೆಗೆ ಒಳಪಟ್ಟು ಮರುಪಾವತಿಸಲು ಬಿಡಬಾರದಿತ್ತು. ಎಚ್ ಫಾರಂ ಇಲ್ಲವೇ ಸಿ ಫಾರಂಗಳನ್ನು ಪಡೆಯುವಂತೆ ನಿರ್ದೇಶಿಸಿ ಆರೋಪಿತರು ಕಡತವನ್ನು ಸಹಾಯಕ ಆಯಕ್ತರಿಗೆ ವಾಪಸ್ ಕಳುಹಿಸಬೇಕಿತ್ತು.

ಆರೋಪಿಯು ತಳೆಯುವ ಮತ್ತೊಂದು ರಕ್ಷಣಾತ್ಮಕ ನಿಲುವೆಂದರೆ ತಪ್ಪುಗಳನ್ನು ತಿದ್ದುವ ಸಲುವಾಗಿ ಹಲವಾರು ಇಲಾಖೆಗಳು/ಅಧಿಕಾರಿಗಳು ಮುಂದೆ ನಡೆಸುವ ಲೆಕ್ಕಪರಿಶೋಧನೆಯಂತಹಾ ಸರಿಪಡಿಸುವಿಕೆ ವ್ಯವಸ್ಥೆಗಳು ಕಾನೂನುನಡಿಯಲ್ಲಿ ಲಭ್ಯವಿದೆ ಎಂಬುದು. ಹಾಗೆಂದು ಮಾತ್ರಕ್ಕೆ ತಮಗೆ ಮಂಡಿಸಲ್ಪಟ್ಟ ಪ್ರಕರಣವನ್ನು ನಿರ್ವಹಿಸಲೆಂದೇ ಇರುವ ನಿಯಮ ಅದನ್ನು ಪರಿಶೀಲಿಸಲು ಇಲಾಖೆಯ ಮೇಲಾಧಿಕಾರಿಗಳು ಹೊರಡಿಸಿರುವ ಮಾರ್ಗಸೂಚಿ, ಇವುಗಳೆಲ್ಲವನ್ನೂ ನಿರ್ಲಕ್ಷಿಸಿ ಮೂಲ ಪರಿಶೀಲನೆಯನ್ನೇ ತಪ್ಪಾಗಿ ಮಾಡಬಹುದೆಂದು ಅರ್ಥವಲ್ಲ. ಸರ್ಕಾರಕ್ಕೆ ಪಾವತಿಸಲ್ಪಟ್ಟ ತೆರಿಗೆ ಹಣದ ಮರುಪಾವತಿ ಕೋರಿ ಅರ್ಜಿಗಳು ಸಲ್ಲಿಸಲ್ಪಟ್ಟಾಗ ಅನರ್ಹ ವ್ಯಕ್ತಿಗಳಿಗೆ ಮರುಪಾವತಿ ಮಾಡಿದಲ್ಲಿ ಅದರಿಂದ ರಾಜ್ಯದ ಬೊಕ್ಕಸಕ್ಕೆ ನಷ್ಟವುಂಟಾಗುತ್ತದೆ. ಹೀಗಾಗಿ ತಿದ್ದುವ ಮೂಲಕ ಮುಂದೆ ಎಂದಾದರೂ ಸರಿಪಡಿಸುವ ಅವಕಾಶವು ಕಾನೂನಿನಲ್ಲಿ ಉಂಟೆಂಬ ರಿಸ್ಕ್ (risk) ಮೇಲೆ ತನ್ನ ಜವಾಬ್ದಾರಿಯನ್ನೇ ಕಡೆಗಣಿಸುವಂತಿಲ್ಲ. ಇಂತಹ ತೀವ್ರವಾದ ವಿಷಯದಡೆಗೆ ಗಮನಹರಿಸದ ಸರ್ಕಾರಿ ನೌಕರನ ಕ್ರಮವು ಕರ್ತವ್ಯ ನಿರ್ಲಕ್ಷ್ಯವಾಗಿದೆ.

ಕರ್ನಾಟಕ ಆರ್ಥಿಕ ಸಂಹಿತೆಯ 142 ರಿಂದ 146 ಎ ವರೆಗಿನ ಅನುಚ್ಛೇದದಂತೆ ಮರುಪಾವತಿ ಆದೇಶಗಳನ್ನು ಹೊರಡಿಸುವ ವಿಷಯಕ್ಕೆ ಸಂಬಂಧಿಸಿದಂತೆ ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿಯಿಂದ ದಿನಾಂಕ 2–3–1995ರ ಸುತ್ತೋಲೆ ಸಂಖ್ಯೆ 45/94–95ನ್ನು ಹೊರಡಿಸಲಾಗಿದ್ದು ಮೇಲು ರುಜು ಮಾಡುವ ಅಧಿಕಾರಿಗಳು ಮರುಪಾವತಿ ಕ್ಲೈಮುಗಳನ್ನು ಮೇಲುರುಜು ಮಾಡುವ ಮುನ್ನ ಪರಿಶೀಲಿಸಬೇಕೆಂದು ಸೂಚನೆಗಳನ್ನು ನೀಡಲಾಗಿದೆ. 2006–07 ರಲ್ಲಿ ಮತ್ತೊಂದು ಸುತ್ತೋಲೆಯನ್ವಯ ಸಿಎಸ್‌ಟಿ ಮಾಸಿಕ ರಿಟರ್ನ್‌ಗಳನ್ನು ತಕ್ಷಣವೇ ಅಂಗೀಕರಿಸಬೇಕು. ಅದರೊಂದಿಗೆ ಅವುಗಳ ಜೊತೆಗೆ ರಿಯಾಯಿತಿ ದರ/ವಿನಾಯತಿ ಕೋರಿಕೆಗೆ ಸಂಬಂಧಿಸಿದ ಶಾಸನಬದ್ಧ ನಮೂನೆಗಳನ್ನು ಸಲ್ಲಿಸಿದ್ದ ಪಕ್ಷದಲ್ಲಿ ಸಿಎಸ್‌ಟಿ ಕಾಯಿದೆಯ ಸೆಕ್ಷನ್ 9(2) ರಡಿಯಲ್ಲಿ ಕರ್ನಾಟಕ ವ್ಯಾಟ್ ಕಾಯಿದೆಯ ಸೆಕ್ಷನ್ 38 ರೊಡನೆ ಓದಿಕೊಂಡಂತೆ ಅವುಗಳನ್ನು ಮೌಲ್ಯ ಮಾಪನಗೊಂಡಿವೆ ಎಂದು ಪರಿಭಾವಿಸಬೇಕು. ಆದ್ದರಿಂದ ರಿಟರ್ನ್ಸ್ ಜೊತೆ ಶಾಸನಬದ್ಧ ನಮೂನೆಗಳು ಇಲ್ಲದಿದ್ದಲ್ಲಿ ಮರುಪಾವತಿ ಆದೇಶ ಹೊರಡಿಸಲು ಅವಕಾಶವಿಲ್ಲ. ಮರುಪಾವತಿ ಆದೇಶ ಹೊರಡಿಸಿದ ನಂತರದ ದಿನಗಳಲ್ಲಿ ಶಾಸನಬದ್ಧ ನಮೂನೆಗಳನ್ನು ಹಾಜರುಪಡಿಸಿದ ನಂತರ ಮರುಪಾವತಿ ಮಾಡಬೇಕೆಂಬ ನಿಬಂಧನೆ ವಿಧಿಸಿ ಮರುಪಾವತಿ ಆದೇಶ ಹೊರಡಿಸಲೂ ಅವಕಾಶವಿಲ್ಲ.

ಮೇಲ್ಕಂಡ ಸೂಚನೆಗಳಿರುವಾಗ ಆರೋಪಿತರು ಹೆಚ್ಚು ಜಾಗೃತರಾಗಿರಬೇಕಿತ್ತು. ಕರದಾತರು ಸರ್ಕಾರಕ್ಕೆ ಪಾವತಿಸಿದ ಲಕ್ಷಾಂತರ/ಕೋಟ್ಯಾಂತರ ರೂ.ಗಳನ್ನು ಮರುಪಾವತಿ ಮಾಡುವಾಗ ಎಚ್ಚರಿಕೆ ವಹಿಸಬೇಕಿತ್ತು. ಇಂತಹ ಸನ್ನಿವೇಶದಲ್ಲಿ ಆರೋಪಿತರ ಹೇಳಿಕೆಯನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಆರೋಪ ಸಾಬೀತಾಗಿದೆ.

ವಿಚಾರಣಾ ವರದಿ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 25.04.2013ರ ನೋಟೀಸಿನಲ್ಲಿ ಶ್ರೀ ಎ.ಕೆ. ವೈ. ಸೈಯದ್, ನಿವೃತ್ತ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು ಇವರಿಗೆ ಅವಕಾಶ ನೀಡಲಾಯಿತು.

ಸದರಿ ನೋಟೀಸಿಗೆ ಆರೋಪಿತರು ಮೇಲೆ (4) ರಲ್ಲಿ ಓದಲಾದ ದಿನಾಂಕ: 26.06.2013 ರ ಉತ್ತರದಲ್ಲಿ ವಿಚಾರಣಾಧಿಕಾರಿಗಳು ನಿಷ್ಪಕ್ಷಪಾತವಾಗಿ ಕಾರ್ಯನಿರ್ವಹಿಸಿಲ್ಲ. ಸಾಕ್ಷಿಗೆ ಪ್ರಕರಣವನ್ನು ಸಮರ್ಥಿಸುವಂತಹ ಪ್ರಶ್ನೆಗಳನ್ನೇ ಹಾಕಿದ್ದಾರೆ. ಕಡತಗಳಲ್ಲಿ ಎಚ್ ಮತ್ತು ಸಿ ಫಾರಂಗಳಿದ್ದವು. ಅಷ್ಟೇ ಅಲ್ಲ, ಅವುಗಳನ್ನು ವಿಚಾರಣಾಧಿಕಾರಿಗಳ ಮುಂದೆ ಹಾಜರುಪಡಿಸಲಾಯಿತು. ಈ ನಮೂನೆಗಳು ಸಹಾಯಕ ಆಯುಕ್ತರ ಕಛೇರಿ ಕಡತದಲ್ಲಿಲ್ಲ ಎಂಬುದು ವಿಚಾರಣಾಧಿಕಾರಿಗಳ ಭಾವನೆಯಾಗಿತ್ತು. ಎರಡನೇ ಸಾಕ್ಷಿ ಗುರುತಿಸಿದಾಗ ಅದೂ ನಿವಾರಣೆಯಾಯಿತು. ಇದಕ್ಕೆ ವ್ಯತಿರಿಕ್ತವಾಗಿ ಸಹಾಯಕ ಆಯುಕ್ತರು ಮರುಪಾವತಿ ಪ್ರಸ್ತಾವನೆ ಸಲ್ಲಿಸುವಾಗ ಅದರ ಜೊತೆ ಈ ನಮೂನೆಗಳನ್ನು ಸಲ್ಲಿಸಿರಲಿಲ್ಲ ಎಂಬುದನ್ನು ಸಾಬೀತುಪಡಿಸುವಲ್ಲಿ ಮಂಡನಾಧಿಕಾರಿ ವಿಫಲರಾದರು. ತಾನು ಮರುಪಾವತಿ ಆದೇಶದೊಡನೆ ಕಡತವನ್ನು ಹೊಸಪೇಟೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಕಛೇರಿಗೆ ಹಿಂತಿರುಗಿಸಿದ್ದೇನೆ. ಮೂರನೇ ಸಾಕ್ಷಿಯು ಆ ಕಛೇರಿಗೆ ಹೋಗಿ ಕಡತ ವೀಕ್ಷಿಸಲಿಲ್ಲ ಎಂಬುದನ್ನು ಒಪ್ಪಿಕೊಂಡಿದ್ದಾರೆ. ಹೀಗಾಗಿ ಅವರು ಸಲ್ಲಿಸಿದ ವರದಿ ತಪ್ಪಾಗಿತ್ತು. ಅವರು ಹೊಸಪೇಟೆ ಕಛೇರಿಗೆ ಭೇಟಿ ನೀಡಿದ್ದಲ್ಲಿ ತನ್ನ ವಿರುದ್ಧ ವಿಚಾರಣೆಯೇ ನಡೆಯುತ್ತಿರಲಿಲ್ಲ. ತನ್ನ ಕಛೇರಿಗೆ ಹೋಗುವಾಗಲೂ ತನಗೆ ತಿಳಿಸಲಿಲ್ಲ. ಸ್ಥಳದಲ್ಲಿ ತನ್ನಿಂದ ವಿವರಣೆ ಪಡೆಯಲೂ ಪ್ರಯತ್ನಿಸಲಿಲ್ಲ.

ಮರುಪಾವತಿ ಕ್ಲೇಮು ಸಲ್ಲಿಸಿದ 35 ದಿನಗಳ ನಂತರ ಬಡ್ಡಿ ಪಾವತಿಸಬೇಕಾಗುತ್ತದೆ ಎಂಬ ತಮ್ಮ ವಾದವನ್ನು ಅಪಾರ್ಥ ಮಾಡಿಕೊಂಡ ವಿಚಾರಣಾಧಿಕಾರಿಗಳು ಹಾಗೆಂದ ಮಾತ್ರಕ್ಕೆ ಫಾರಂಗಳನ್ನು ಸಲ್ಲಿಸಿದ್ದರೂ ಮರುಪಾವತಿ ಮಾಡಬೇಕೆಂಬ ಅರ್ಥವಲ್ಲ ಎಂದು ತಿಳಿಸಿದ್ದಾರೆ. ವಾಸ್ತವವಾಗಿ ಮರುಪಾವತಿ ಕ್ಲೇಮುಗಳೊಡನೆ ಎರಡನೇ ಆರೋಪಿಯಿಂದ ನಮೂನೆಗಳನ್ನು ತಾವು ಸ್ವೀಕರಿಸಿದ್ದು ಸದರೀ ನಮೂನೆಗಳನ್ನು ದಾಖಲೆಗಳೊಡನೆ 35 ದಿನಗಳ ಒಳಗೆ ಮರು ಪಾವತಿ ಮಾಡಲು ಅನುಕೂಲವಾಗುವಂತೆ ಸಹಾಯಕ ಆಯುಕ್ತರಿಗೆ ಹಿಂತಿರುಗಿಸಿದ್ದೆ. ಈ ನನ್ನ ವಾದವನ್ನು ವಿಚಾರಣಾಧಿಕಾರಿಗಳು ಕುಯುಕ್ತಿಯಿಂದ ತಪ್ಪಾಗಿ ಅರ್ಥೈಸಿದ್ದಾರೆ. ಎರಡನೇ ಆರೋಪಿತರು ಶಾಸನಬದ್ಧ ನಮೂನೆಗಳನ್ನು ಒಂದನೇ ಆರೋಪಿಗೆ ಮರುಪಾವತಿ ಪ್ರಸ್ತಾವನೆಯೊಡನೆ ಸಲ್ಲಿಸಲಿಲ್ಲ ಎಂಬುದನ್ನು ಸಾಬೀತುಪಡಿಸುವುದು ಮಂಡನಾಧಿಕಾರಿಗಳ ಜವಾಬ್ದಾರಿ ಆಗಿತ್ತು. ಅದರಲ್ಲಿ ಅವರು ವಿಫಲರಾದರು. ಆಗ ವಿಚಾರಣಾಧಿಕಾರಿಗಳ ಮುಂದೆ ಇದ್ದ ಆಯ್ಕೆ ಎಂದರೆ ಆರೋಪ ಸಾಬೀತಾಗಿಲ್ಲವೆಂಬ ವರದಿ ನೀಡುವುದಾಗಿತ್ತು. ಅದರೆ ವಿಚಾರಣಾಧಿಕಾರಿಗಳು ತಪ್ಪು ದಾರಿಗೆಳೆವ ರೀತಿಯಲ್ಲಿ ಪರಾಮರ್ಶಿಸಿದರು. ಕೇವಲ ಮೇಲುರುಜು ಮಾಡುವುದಕ್ಕೆ ಮಾತ್ರ ತನ್ನ ಪಾತ್ರ ಸೀಮಿತವಾಗಿತ್ತು. ಅದರ ವಿಚಾರಣಾಧಿಕಾರಿಗಳು ತನ್ನನ್ನು ಅನಗತ್ಯವಾಗಿ ಸಾಕ್ಷಿ ನೀಡುವ ಪರಿಸ್ಥಿತಿಗೆ ದೂಡಿ ಆ ಮೂಲಕ ತಪ್ಪು ದಾರಿಗೆಳೆವ ಚಿತ್ರಣ ನೀಡಿದರು.

Deemed ಮೌಲ್ಯಮಾಪನ ಹಾಗೂ ಮರು ಮೌಲ್ಯ ಮಾಪನಗಳಿಗೆ ಇರುವ ವ್ಯತ್ಯಾಸವನ್ನು ಅರ್ಥ ಮಾಡಿಕೊಳ್ಳದ ವಿಚಾರಣಾಧಿಕಾರಿಗಳು ಕರ್ನಾಟಕ ವ್ಯಾಟ್ ಕಾಯಿದೆಯನ್ನು ಅಪಾರ್ಥಕ್ಕೆಡೆಯಾಗುವಂತೆ ಅರ್ಥೈಸಿದ್ದಾರೆ. Deemed ಮೌಲ್ಯಮಾಪನವು ಆಯುಕ್ತರು JDN ಆದೇಶ ಮಾಡಿದ ನಂತರವೇ ಮರುಮೌಲ್ಯ ಮಾಪನಕ್ಕೆ ಒಳಪಡುತ್ತದೆ. ಮರುಮೌಲ್ಯಮಾಪನ ಆದೇಶಗಳು ಸೆಕ್ಷನ್ 63–ಎ ರನ್ವಯ SMR ಗೆ ಒಳಪಡುತ್ತವೆ. Deemed assesment ಗಳು ಸೆಕ್ಷನ್ 63–ಎ ಅಡಿ ಎಸ್‌ಎಂಆರ್ ಗೆ ಒಳಪಡುವುದಿಲ್ಲ. ಸೆಕ್ಷನ್ 38ರಡಿ ಆದೇಶವನ್ನೇ ಹೊರಡಿಸದಿರುವಾಗ ಸೆಕ್ಷನ್ 63–ಎ ಅನ್ವಯಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ವಿಚಾರಣಾಧಿಕಾರಿಯ ಸೆಕ್ಷನ್ 63–ಎ analysis is perverted.

ಸಹಾಯಕ ಆಯುಕ್ತರು (2ನೇ ಆರೋಪಿ) ಮರುಪಾವತಿ ಪ್ರಸ್ತಾವನೆಗಳನ್ನು ಸಲ್ಲಿಸುವ ಸಿದ್ಧ ಮಾದರಿಯನ್ನೇ ತಯಾರಿಸಿದ್ದಾರೆ. ಅವರ ಎಲ್ಲಾ ಪ್ರಸ್ತಾವನೆಗಳಲ್ಲೂ ಸಿದ್ದ ಮಾದರಿಯಲ್ಲಿರುವ safety clause ಗಳು ಅವು ಪ್ರಸ್ತುತವಿರಲಿ ಅಥವಾ ಅಪ್ರಸ್ತುತವಿರಲೀ ಇದ್ದೇ ಇರುತ್ತವೆ. ಅವರ ಈ ಯಾಂತ್ರಿಕ ಮನೋಭಾವವನ್ನು ಸಾಬೀತುಪಡಿಸಲು ಅದೇ ಮಾದರಿಯ 5 ಪ್ರಸ್ತಾವನೆಗಳನ್ನು ವಿಚಾರಣಾಧಿಕಾರಿಗಳಿಗೆ ಸಲ್ಲಿಸಲಾಗಿತ್ತು. ಆದರೆ ವಿಚಾರಣಾಧಿಕಾರಿಯು ಅವುಗಳನ್ನು ಪರಿಗಣಿಸಲು ವಿಫಲರಾಗಿದ್ದಾರೆ. ಅಲ್ಲದೇ ಅದನ್ನು ಪರಿಗಣಿಸದಿರುವುದಕ್ಕೆ ಯಾವುದೇ ಕಾರಣಗಳನ್ನು ನೀಡಿಲ್ಲ. ಸರಿಪಡಿಸುವಿಕೆ ವ್ಯವಸ್ಥೆ ಕುರಿತ ನಮ್ಮ ಮಾನ್ಯವಾದ ವಾದವನ್ನು ಪರಿಗಣಿಸಲಿಲ್ಲ. ವಿಚಾರಣೆಯ ಪೂರ್ತಾ ತಮ್ಮ ಬಗ್ಗೆ ಪೂರ್ವಾಗ್ರಹ ಪೀಡಿತರಾಗಿ ತಾವು ಸಲ್ಲಿಸಿದ್ದ ಪ್ರಸ್ತುತ ಸಾಕ್ಷ್ಯಗಳನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿ, ಅಪ್ರಸ್ತುತ ದಾಖಲೆಗಳನ್ನು ಸಾಕ್ಷ್ಯಗಳನ್ನು ಮಾನ್ಯ ಮಾಡಿ ಪೂರ್ವ ನಿರ್ಧರಿತ ವರದಿ ನೀಡಿ ಆರೋಪ ಸಾಬೀತಾಗಿದೆ ಎಂಬ ಅಸಮ್ಮತ ನಿರ್ಣಯ ತಳೆದಿದ್ದಾರೆ. ಆದ್ದರಿಂದ ವಿಚಾರಣಾಧಿಕಾರಿಯ ನಿರ್ಣಯವನ್ನು ಒಪ್ಪದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ.

ಆರೋಪಿತರ ಅಹವಾಲನ್ನು ಪರಿಶೀಲಿಸಲಾಗಿದೆ. ತಾನು ಮರುಪಾವತಿ ಆದೇಶಗಳಿಗೆ ಸಹಿ ಮಾಡುವಾಗ ಸಿ ಮತ್ತು ಎಚ್ ಫಾರಂಗಳು ಕಡತದಲ್ಲಿ ಇದ್ದವು ಎಂಬ ಅವರ ವಾದವನ್ನು ಸಮರ್ಥಿಸಲು ಎರಡನೇ ಸಾಕ್ಷಿಯು ಪಾಟೀ ಸವಾಲಿನಲ್ಲಿ ನೀಡಿದ ಹೇಳಿಕೆಗಳನ್ನು ಆಧಾರವಾಗಿ ಇಟ್ಟುಕೊಂಡಿದ್ದಾರೆ. ಆದರೆ ಎರಡನೇ ಸಾಕ್ಷಿಯು ಆ ಫಾರಂಗಳು ಕಡತಕ್ಕೆ ಎಂದು ಸೇರಿದವು ಎಂಬುದನ್ನು ಹೇಳಲು ಸಾಧ್ಯವಿಲ್ಲ. ತಾನು ತನಿಖೆ ನಡೆಸಲಿಲ್ಲ. ಮೇಲಾಧಿಕಾರಿಗಳ ಸೂಚನೆಯಂತೆ ಹೊಸಪೇಟೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿಗೆ ಹೋಗಿ ಆರೋಪಿತರು ಮರುಪಾವತಿ ಆದೇಶಕ್ಕೆ ಮೇಲುರುಜು ಮಾಡಿದ ಕಡತಗಳನ್ನು ತಂದೇ ಎಂದಷ್ಟೇ ಹೇಳಿದ್ದಾರೆ. ಹೀಗಿರುವಾಗ ತಾನು ಮೇಲುರುಜು ಮಾಡುವಾಗ ಸಿ ಮತ್ತು ಎಚ್ ಫಾರಂಗಳು ಇದ್ದವು ಎಂಬ ಆರೋಪಿತರ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲ.

ಮೂರನೇ ಸಾಕ್ಷಿಯು ಹೊಸಪೇಟೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿಗೆ ಹೋಗಿ ಪ್ರಕರಣಕ್ಕೆ ಸಂಬಂಧಿಸಿದ ಕಡತಗಳನ್ನು ನೋಡದ ಕಾರಣ ವಿಚಾರಣೆ ನಡೆಯಿತು ಎಂಬ ವಾದವನ್ನೂ ಒಪ್ಪಲಾಗುವುದಿಲ್ಲ. ಏಕೆಂದರೆ ಅವರು ಉಲ್ಲೇಖಿಸುವ ಎರಡನೇ ಸಾಕ್ಷಿಯ ತಾನು ಕಡತಗಳನ್ನು ಮಾತ್ರ ಸಂಗ್ರಹಿಸಿ ತಂದೇ. ಯಾವುದೇ ತನಿಖೆ ನಡೆಸಲಿಲ್ಲ ಎಂದು ತಿಳಿಸಿದ್ದಾರೆ. ಹೀಗಾಗಿ ಪಾಟೀ ಸವಾಲಿಗೆ ಉತ್ತರಿಸುವಾಗ ಅವರು ಫಾರಂಗಳು ಕಡತದಲ್ಲಿ ಇದ್ದುದನ್ನು ಒಪ್ಪಿದರೂ ಸಹ ಅವು ಆರೋಪಿತರು ಮರುಪಾವತಿ ಆದೇಶಕ್ಕೆ ಮೇಲು ರುಜು ಮಾಡುವಾಗ ಕಡತದಲ್ಲಿದ್ದವೇ ಎಂಬುದನ್ನು ತಿಳಿಸಲು ತಕ್ಕವರಾಗುವುದಿಲ್ಲ. ಆರೋಪಿತರಿಂದ ಮೇಲುರುಜು ಮಾಡಲ್ಪಟ್ಟ ಮರುಪಾವತಿ ಆದೇಶಗಳನ್ನು ಗುರುತಿಸಲು ಮಾತ್ರ ಅವರು ಸಮರ್ಥರಾಗುತ್ತಾರೆ.

ಮೂರನೇ ಸಾಕ್ಷಿಯು ತನ್ನ ಹೇಳಿಕೆಯಲ್ಲಿ ತಾನು ಆರೋಪಿತರ ಕಛೇರಿಯಲ್ಲಿ ಪ್ರಶ್ನಿತ ಮರುಪಾವತಿಯ ಕಡತಗಳನ್ನು ಪರಿಶೀಲಿಸಿದಾಗ ವ್ಯಾಪಾರಿಗಳು ಸಲ್ಲಿಸಿದ ಯಾವ ಸಿ ಮತ್ತು ಎಚ್ ಫಾರಂಗಳೂ ಇರಲಿಲ್ಲ ಎಂದು ತಿಳಿಸಿದ್ದಾರೆ. ಆರೋಪಿತ ಅಧಿಕಾರಿಯು ಆದೇಶ ಹೊರಡಿಸಿದ ಎರಡು ಮತ್ತು ಮೂರು

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ತಿಂಗಳ ಒಳಗಾಗಿ ಕಛೇರಿಗೆ ಭೇಟಿ ನೀಡಿ ದಾಖಲೆಗಳನ್ನು ಪರಿಶೀಲಿಸಿರುವ ಇವರ ಹೇಳಿಕೆ ಪ್ರಸ್ತುತವಾಗಿದೆ. ಸಹಾಯಕ ಆಯುಕ್ತರು ತಮ್ಮ ಆದೇಶದಲ್ಲಿ ಎಚ್ ಫಾರಂ ಹಾಗೂ ರಫ್ತು ದಾಖಲೆಗಳನ್ನು ಸಲ್ಲಿಸಬೇಕೆಂಬ ನಿಬಂಧನೆಗಳಿಗೆ ಒಳಪಟ್ಟು ಮರುಪಾವತಿ ಮಾಡಬಹುದೆಂದು ಸ್ಪಷ್ಟವಾಗಿ ನಮೂದಿಸಿದ್ದಾರೆ. ಆರೋಪಿತರು ಸಹಿ ಮಾಡಿದ್ದಾರೆ. ಇದಾದ ಮೂರು ತಿಂಗಳೊಳಗೆ ಕಡತ ಪರಿಶೀಲಿಸಿದಾಗ ಫಾರಂಗಳು ಕಂಡುಬರಲಿಲ್ಲ. ಇದರಿಂದಾಗಿ ನಮೂನೆಗಳು ಇಲ್ಲದೇ ಮರುಪಾವತಿ ಆದೇಶ ಹೊರಟು ಮರುಪಾವತಿ ಆಯಿತು ಎಂಬುದು ಸಾಬೀತಾಗುತ್ತದೆ. ಆದರೆ ಇವು ಸಿದ್ದ ಮಾದರಿಗಳಾಗಿದ್ದು ಪ್ರಸ್ತಾವನೆಯಲ್ಲಿ ಇರುತ್ತವೆ. ಆದರೆ ಅಪ್ರಸ್ತುತ ಎಂದು ಆರೋಪಿತರು ಪ್ರತಿಪಾದಿಸಿದ್ದಾರೆ. ಹಾಗಿದ್ದಲ್ಲಿ ಇವು ಇರುವ ಅವಶ್ಯಕತೆ ಇರಲಿಲ್ಲ. ಆದ್ದರಿಂದ ಆರೋಪಿತರ ವಾದವನ್ನು ಒಪ್ಪವುದು ಸಾಧ್ಯವಿಲ್ಲ.

ಮರುಪಾವತಿ ಕ್ಲೇಮು ಸಲ್ಲಿಸಿದ 35 ದಿನಗಳ ಒಳಗೆ ಮರುಪಾವತಿ ಮಾಡದಿದ್ದಲ್ಲಿ ಬಡ್ಡಿ ನೀಡಬೇಕಾಗುತ್ತದೆ ಎಂಬ ಕಾರಣಕ್ಕಾಗಿ ನಮೂನೆಗಳನ್ನು ಸಲ್ಲಿಸದಿದ್ದರೂ ಮರುಪಾವತಿ ಆದೇಶಕ್ಕೆ ಸಹಿ ಮಾಡಿದ್ದೇನೆಂದು ವಿಚಾರಣಾಧಿಕಾರಿಗಳು ತಪ್ಪಾಗಿ ನಿರ್ಣಯ ನೀಡಿದ್ದಾರೆ. ನಮೂನೆಗಳು ಕಡತದಲ್ಲಿ ಇದ್ದವು ಎನ್ನುವುದು ಎರಡನೇ ಸಾಕ್ಷಿಯ ಹೇಳಿಕೆಯಿಂದ ದೃಢಪಡುತ್ತದೆ. ಆದ್ದರಿಂದ ತನ್ನ ವಿರುದ್ಧ ಆರೋಪ ಸಾಬೀತಾಗುವುದಿಲ್ಲ ಎಂಬ ಬಗ್ಗೆ ಹೇಳುವುದಾದರೆ ಪ್ರಶ್ನಿತ ದಾಖಲೆಗಳು ಮೇಲು ರುಜು ಮಾಡುವಾಗ ಇದ್ದವೇ ಎಂಬುದನ್ನು ಎರಡನೇ ಸಾಕ್ಷಿಯು ಹೇಳಿಲ್ಲ. ಇನ್ನು ಏನು ಮರುಪಾವತಿ ಆದೇಶ ಹೊರಡಿಸಲ್ಪಟ್ಟ 2, 3 ತಿಂಗಳಲ್ಲಿ ಕಡತಗಳನ್ನು ಪರಿಶೀಲಿಸಿದಾಗ ನಮೂನೆಗಳು ಕಂಡು ಬಂದಿರಲಿಲ್ಲ ಎಂದು ಆರೋಪಿತರ ಕಛೇರಿಯಲ್ಲಿದ್ದ ಮರುಪಾವತಿಗೆ ಸಂಬಂಧಿಸಿದ ಕಡತಗಳನ್ನು ಪರಿಶೀಲಿಸಿದ ಮೂರನೇ ಸಾಕ್ಷಿಯು ತಿಳಿಸಿದ್ದಾರೆ. ಇದನ್ನು ನಿರಾಕರಿಸಲು ಕಾರಣಗಳಿರುವುದಿಲ್ಲ. ಹಾಗೆಯೇ deemed ಮೌಲ್ಯಮಾಪನ ಕುರಿತು ಆರೋಪಿತರ ವಾದವು ಪರಿಗಣನಾರ್ಹವಲ್ಲ. ಅಗತ್ಯವಾದ ನಮೂನೆಗಳು ಕಡತದಲ್ಲಿ ಲಭ್ಯವಿಲ್ಲದಿದ್ದರೂ ಅಗತ್ಯ ನಮೂನೆಗಳನ್ನು ಸಲ್ಲಿಸುವ ಷರತ್ತಿಗೊಳಪಟ್ಟು ಎರಡನೇ ಆರೋಪಿತರು ಪ್ರಸ್ತಾಪಿಸಿದ ಮರುಪಾವತಿಗೆ ಮೇಲುರುಜು ಮಾಡಿ ಕೋಟ್ಯಾಂತರ ರೂ.ಗಳನ್ನು ಅನಗತ್ಯವಾಗಿ ಮರುಪಾವತಿ ಮಾಡಿರುವುದು ವಿಚಾರಣೆಯಲ್ಲಿ ಸಾಬೀತಾಗಿದೆ. ಆರೋಪಿತರ ಕ್ರಮದಿಂದಾಗಿ ಮರುಮೌಲ್ಯಮಾಪನ ಹಾಗೂ ಮರುಕರನಿರ್ಧರಣೆಯಂತಹ, ವಸೂಲಾತಿ ಕ್ರಮಗಳನ್ನು ಕೈಗೊಳ್ಳಲಾಯಿತು. ಅಂತಿಮವಾಗಿ ಆರೋಪಿತರಿಂದ ಅಕ್ರಮವಾಗಿ ಮರುಪಾವತಿ ಮಾಡಲ್ಪಟ್ಟ ವಸೂಲು ಮಾಡಲು ಸಾಧ್ಯವಾಗದೇ ಸರ್ಕಾರಕ್ಕೆ ರಾಜಸ್ವ ಸ್ವರೂಪದಲ್ಲಿ ನಷ್ಟ ಉಂಟಾದ ಮೊತ್ತ ರೂ. 15,94,393/–ಗಳಾಗಿವೆ. ಆದ್ದರಿಂದ ಆರೋಪ ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡು ಶ್ರೀ ಎ.ಕೆ.ವೈ. ಸೈಯದ್ ಅವರ ದುರ್ನಡತೆಯಿಂದ ರೂ. 15,94,393/–ಗಳ ರಾಜಸ್ವ ನಷ್ಟ ಉಂಟಾಗಿದೆ ಎಂಬುದನ್ನು ಕಂಡುಕೊಂಡ ಸರ್ಕಾರವು ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ನಿರ್ಣಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 33 ವಾತೆತ 2011, ಬೆಂಗಳೂರು, ದಿನಾಂಕ: 02.01.2016.**

ಕರ್ನಾಟಕ ನಾಗರಿಕ ಸೇವಾ ನಿಯಮಗಳು ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎ.ಕೆ.ವೈ. ಸೈಯದ್, ನಿವೃತ್ತ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು ಅವರಿಗೆ ಈ ಕೆಳಕಂಡ ದಂಡನೆಗಳನ್ನು ವಿಧಿಸುತ್ತದೆ :–

(ಅ) ಕೆಸಿಎಸ್‌ಆರ್ ನಿಯಮ 214 (1) (ಎ) ರನ್ವಯ ಇವರ ಮಾಸಿಕ ವಿಶ್ರಾಂತಿ ವೇತನದ ಪೂರ್ಣ ಮೊತ್ತವನ್ನು ನಿರಂತರವಾಗಿ ತಡೆಹಿಡಿಯುವುದು.

(ಆ) ಕೆಸಿಎಸ್‌ಆರ್ ನಿಯಮ 214 (1)(ಬಿ) ಪ್ರಕಾರ ಅವರ ಡಿ.ಸಿ.ಆರ್.ಜಿ ಮೊತ್ತವನ್ನು ಸರ್ಕಾರಕ್ಕೆ ಉಂಟಾದ ನಷ್ಟಕ್ಕೆ ಸರಿದೂಗಿಸಿಕೊಳ್ಳುವುದು.

(ಇ) ಕೆಸಿಎಸ್‌ಆರ್ ನಿಯಮ 118–ಎ (4) ರನ್ವಯ ಅವರ ಗಳಿಕೆ ರಜೆಯ ನಗದೀಕರಣ ಸೌಲಭ್ಯದ ಸಂಪೂರ್ಣ ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಗೆ ಜಮಾ ಮಾಡುವುದು.

(ಈ) ಉಳಿಯಬಹುದಾದ ನಷ್ಟದ ಮೊತ್ತವನ್ನು ಅವರ ಮೇಲೆ ಸಕ್ಷಮ ನ್ಯಾಯಾಲಯದಲ್ಲಿ ಸಿವಿಲ್ ದಾವೆ ಹೂಡುವ ಮೂಲಕ ವಸೂಲು ಮಾಡಲು ವಾಣಿಜ್ಯ ತೆರಿಗೆ ಆಯುಕ್ತರು ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಅಳವಂಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2 & ಸಮನ್ವಯ)

**P.R. 248**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59